# ಮೂರು ಗ್ರಂಥಗಳು

# ಇಬ್ಬರು ಗುರುಗಳು

# ಒಬ್ಬ ಬೋಧಕನು




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು



www.thraithashakam.org







# ಮೂರು ಗ್ರಂಥಗಳು
# ಇಬ್ಬರು ಗುರುಗಳು
# ಒಬ್ಬ ಬೋಧಕನು


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 90/–**

## "ಇಂದೂ ಜ್ಞಾನವೇದಿಕೆ" ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ - ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು– ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ‘ಇಂದೂ ಜ್ಞಾನವೇದಿಕೆ’ ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮೀನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ ‘ಸಿ’ (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‍ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಮೂರು ಗ್ರಂಥಗಳು
## ಇಬ್ಬರು ಗುರುಗಳು
### ಒಬ್ಬ ಬೋಧಕನು

ಇಲ್ಲಿ ಶಿರೋಫಲಕ ಬರಹದಲ್ಲಿ ಮೊದಲು ಮೂರು ಗ್ರಂಥಗಳು ಎಂದು ಇದೆ. ನಂತರ ಇಬ್ಬರು ಗುರುಗಳು, ಒಬ್ಬ ಬೋಧಕನು ಎಂದು ಇದೆ. ವರಸಕ್ರಮದಲ್ಲಿ ಮುಂದಿರುವ ಮೂರು ಗ್ರಂಥಗಳನ್ನು ಕುರಿತು ತಿಳಿದುಕೊಂಡು, ನಂತರ ಇಬ್ಬರು ಗುರುಗಳು ಯಾರೋ! ಒಬ್ಬ ಬೋಧಕನು ಯಾರೋ! ತಿಳಿದುಕೊಳ್ಳೋಣ. ಸಂಖ್ಯೆಗಳಲ್ಲಿ 'ಮೂರು' ಎನ್ನುವುದು ಪ್ರತ್ಯೇಕವಾದ ಸಂಖ್ಯೆಯಾಗಿದೆ. ಪ್ರಪಂಚದಲ್ಲಿನ ಪ್ರಜೆಗಳೆಲ್ಲರೂ ಮೂರು ಲೋಕಗಳಾಗಿದ್ದಾರೆ. ಅಂದರೆ ಮೂರು ಗುಣಗಳ ಗುಂಪುಗಳಾಗಿದ್ದಾರೆ. ಕೆಳಗೆ ಪ್ರಜೆಗಳು ಮೂರು ಲೋಕಗಳಾಗಿ ಇರುವಾಗ, ಮೇಲೆ ದೇವರು ಸಹ ಮೂರು ಭಾಗಗಳಾಗಿ ವಿಭಾಗವಾಗಿ, ಮೂರು ಹೆಸರುಗಳಿಂದ ಇರುತ್ತಾ ವಿಶ್ವವನ್ನು ಪಾಲಿಸುತ್ತಿದ್ದಾನೆ. ಕೆಳಗೆ ಪ್ರಜೆಗಳು ಮೇಲೆ ದೇವರು ಮೂರು ವಿಭಾಗಗಳಾಗಿಯೇ ಇರುವುದರಿಂದ ಮಧ್ಯದಲ್ಲಿರುವುದು ಏನಾದರೂ ಮುಖ್ಯವಾಗಿ ಮೂರರಿಂದಲೇ ಸಂಬಂಧ ಪಟ್ಟಿರುತ್ತದೆ. **ಜೀವಿಗೂ (ಪ್ರಜೆಗಳಿಗೂ) ದೇವರಿಗೂ ಮಧ್ಯ ಸಂಬಂಧ ಜ್ಞಾನ ಹೊರತು ಏನೂ ಇಲ್ಲ**. ಜೀವಿಗೂ ದೇವರಿಗೂ, ಪ್ರಜೆಗಳಿಗೂ ಪರಮಾತ್ಮಗೂ ಮಧ್ಯದಲ್ಲಿರುವ ಜ್ಞಾನವನ್ನು ಸಹ ದೇವರು ಮೂರು ವಿಧಗಳೇ ತಿಳಿಸಿದ್ದಾನೆ. ದೇವರು, ದೇವರಿಂದ ಸೃಷ್ಟಿಸಲ್ಪಟ್ಟ ಮನುಷ್ಯರು ಮತ್ತು ದೇವರಿಗೂ ಮನುಷ್ಯರಿಗೂ ಮಧ್ಯದಲ್ಲಿರುವ ಜ್ಞಾನ ಮೂರು ಮುಖ್ಯವಾದವೇ. ಈ ಮುಖ್ಯವಾದ ಮೂರು, ಮೂರು ವಿಧಗಳಾಗಿ ವಿಭಜಿಸಲ್ಪಟ್ಟಿವೆ. ಆದ್ದರಿಂದ "ಮೂರು" ಎಂಬ ಸಂಖ್ಯೆ ಎಷ್ಟೋ ಪ್ರಾಧಾನ್ಯತೆ ಹೊಂದಿದೆಯೆಂದು ತಿಳಿಯುತ್ತಿದೆ. ಮನುಷ್ಯರು, ಜ್ಞಾನ, ದೇವರು ಮೂವರು ಮೂರು ವಿಧಗಳಾಗಿ ಹೇಗಿರುವುದು ಕೆಳಗೆ ನೋಡೋಣ.

| ಮನುಷ್ಯರು | ಜ್ಞಾನ | ದೇವರು |
|---|---|---|
| 1) ಸಾತ್ವಿಕರು | ವಾಣಿ ಮೂಲಕ ತಿಳಿದಿದೆ | ಕ್ಷರ ಪುರುಷನು |
| 2) ರಾಜಸರು | ತೆರೆ ಹಿಂಬದಿಯಿಂದ ತಿಳಿದಿದೆ | ಅಕ್ಷರ ಪುರುಷನು |
| 3) ತಾಮಸರು | ದೂತನ ಮೂಲಕ ತಿಳಿದಿದೆ | ಪುರುಷೋತ್ತಮನು |

ಸೃಷ್ಠಿಯಲ್ಲಿ ಮುಖ್ಯವಾಗಿರುವವು ಮೂರೇ ಎಂದು ಅವುಗಳೇ ಒಂದು ಜೀವಕೋಟಿ, ಎರಡು ದೈವಜ್ಞಾನ, ಮೂರು ದೇವರು ಎಂದು ಗುರುತಿಸಲ್ಪಟ್ಟಿದ್ದೇವೆ. ಆದ್ದರಿಂದ "ಮೂರು" ಎಂಬ ಸಂಖ್ಯೆ ಪ್ರತ್ಯೇಕವಾದುದೆಂದು ಹೇಳಬಹುದು. ಮೂರು ವಿಧಗಳ ಮನುಷ್ಯರಿಗೆ, ಮೂರು ವಿಧಗಳ ಜ್ಞಾನ ತಿಳಿದಾಗ, ಆ ಮೂರು ವಿಧಗಳಲ್ಲಿ ತಿಳಿದ ಜ್ಞಾನ ಸಹ ಮೂರು ಗ್ರಂಥಗಳಾಗಿ ತಯಾರಾಗಿದೆ. ಈ ಮೂರು ಗ್ರಂಥಗಳು ಮೂವರು ವ್ಯಕ್ತಿಗಳ ಮೂಲಕ ಹೊರ ಬಂದಿವೆ. ಆ ಮೂವರು ವ್ಯಕ್ತಿಗಳು, ಮೂರು ಸ್ಥಾನಗಳಲ್ಲಿ, ಮೂರು ದೇಶಗಳಲ್ಲಿ ಹೇಳುವುದು ನಡೆದಿದೆ.

| | ಗ್ರಂಥಗಳು | ವ್ಯಕ್ತಿಗಳು | ಸ್ಥಾನಗಳು |
|---|---|---|---|
| 1) | ಭಗವದ್ಗೀತಾ | ಶ್ರೀಕೃಷ್ಣನು | ಗುರುವು |
| 2) | ಬೈಬಲ್ | ಯೇಸು | ಗುರುವು |
| 3) | ಖುರ್‌ಆನ್ | ಜಿಬ್ರಯೇಲ್ | ಬೋಧಕನು |

ಈ ವಿಧವಾಗಿ ಮೂರು ಗ್ರಂಥಗಳು ಮೂವರು ವ್ಯಕ್ತಿಗಳಿಂದ ಮೂರು ಸ್ಥಾನಗಳಲ್ಲಿ ಬೋಧಿಸಲ್ಪಟ್ಟಿವೆ. ಮೇಲೆ ಶಿರೋಫಲಕದ ಮೇಲೆ ಬರೆದ ಹೆಸರುಗಳೇ ಇಲ್ಲಿ ಹೇಳಲಾಗಿದೆ. ಇಲ್ಲಿ "ಮೂರು" ಎಂಬ ಪದಕ್ಕೆ ಆಧ್ಯಾತ್ಮಿಕ ರಂಗದಲ್ಲಿ ಪ್ರತ್ಯೇಕವಾದ ಗುರುತು ಇರುವಂತೆ ತಿಳಿದುಕೊಂಡಿದ್ದೇವೆ. ಈಗ ಗ್ರಂಥಗಳು ಎಂಬ ಹೆಸರಿನಲ್ಲಿ ಏನಾದರೂ ವಿಶೇಷತೆ ಇದಿಯೇನೊ ಗ್ರಹಿಸೋಣ. ದೇವರಿಗೂ ಜೀವಿಗೂ ಮಧ್ಯದಲ್ಲಿರುವ ಜ್ಞಾನ ಮೂರು ಗ್ರಂಥಗಳ ರೂಪದಲ್ಲಿ ಹೊರಬಂದಿದೆ. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ, ಕೆಲವು ಕಾಗದಗಳ ಸಮೂಹವನ್ನು ಪುಸ್ತಕ ಎನ್ನಬಹುದು, ಪುಸ್ತಕವನ್ನೇ ಗ್ರಂಥ ಎಂದು ಸಹ ಅನ್ನಬಹುದು. ಕೆಲವರು ಪುಸ್ತಕಗಳನ್ನು ಶಾಸ್ತ್ರಗಳೆಂದು ಸಹ ಹೇಳುತ್ತಿರುತ್ತಾರೆ. ಪುಸ್ತಕಗಳು ಸಹ ಮೂರು ವಿಧಗಳು ಇವೆ. ಅವು ಹೀಗಿವೆ ನೋಡಿರಿ.

| **ಪುಸ್ತಕಗಳು** | **ಶಾಸ್ತ್ರಗಳು** | **ಗ್ರಂಥಗಳು** |
|---|---|---|
| ವೇದಗಳು | ಗಣಿತ ಶಾಸ್ತ್ರ | ಭಗವದ್ಗೀತೆ |
| ಉಪನಿಷತ್ತಗಳು | ಖಗೋಳ ಶಾಸ್ತ್ರ | ಬೈಬಲ್ |
| ಚರಿತ್ರೆಗಳು | ರಸಾಯನ ಶಾಸ್ತ್ರ | ಖುರ್‌ಆನ್ |
| ಕಥೆಗಳು | ಭೌತಿಕ ಶಾಸ್ತ್ರ | ಜ್ಯೋತಿಷ್ಯ ಶಾಸ್ತ್ರ |

ಸಂಖ್ಯೆಗಳಲ್ಲಿ ಮೂರು ಸಂಖ್ಯೆಗೆ ಎಷ್ಟು ಪ್ರತ್ಯೇಕತೆ ಇದೆಯೋ, ಹಾಗೆಯೇ ಪುಸ್ತಕ, ಶಾಸ್ತ್ರ, ಗ್ರಂಥಗಳು ಎಂಬ ಮೂರರಲ್ಲಿ ಗ್ರಂಥ ಎಂಬುದು ಎಷ್ಟೋ ಅರ್ಥದಿಂದ ಕೂಡಿಕೊಂಡಿರುವುದಾಗಿ ಪ್ರತ್ಯೇಕತೆ ಹೊಂದಿದೆ. ಗ್ರಂಥವಾದ ಭಗವದ್ಗೀತೆಯಾಗಲಿ, ಬೈಬಲ್ ಆಗಲಿ, ಖುರ್‌ಆನ್ ಆಗಲಿ ಮೂರು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವವೇ ಆದರೂ, ಅವುಗಳನ್ನು ಶಾಸ್ತ್ರಗಳಲ್ಲಿ ಸೇರಿಸದೆ ಪ್ರತ್ಯೇಕಿಸಿ ಗ್ರಂಥಗಳು ಎನ್ನುತ್ತಿದ್ದೇವೆ. ಹಾಗೆ ಎನ್ನುವುದಕ್ಕೆ ಕಾರಣ ಇದೆ. ಅದೇನೆಂದರೆ! ಶಾಸ್ತ್ರಗಳು ಎರಡು ವಿಧಗಳು ಇವೆ. ಪ್ರಪಂಚಕ್ಕೆ ಸಂಬಂಧಿಸಿರುವ ವೆಂದು, ಪರಮಾತ್ಮಕ್ಕೆ ಸಂಬಂಧಿಸಿರುವವೆಂದು ಎರಡು ವಿಧಗಳು ಇವೆ. ಅದರಲ್ಲಿ ಪ್ರಪಂಚಕ್ಕೆ ಸಂಬಂಧಿಸಿದವುಗಳನ್ನು ಮಾತ್ರವೇ ಶಾಸ್ತ್ರಗಳೆಂದು, ಪರಮಾತ್ಮನಿಗೆ ಸಂಬಂಧಿಸಿದವುಗಳನ್ನು ಗ್ರಂಥಗಳೆನ್ನಬೇಕು. ಭಗವದ್ಗೀತೆ ಬ್ರಹ್ಮವಿದ್ಯಾ ಶಾಸ್ತ್ರವೇ ಆದರೂ, ಷಟ್‌ಶಾಸ್ತ್ರಗಳಲ್ಲಿ ಒಂದಾದರೂ, ಅದನ್ನು ಶಾಸ್ತ್ರವೆಂದು ಹೇಳಿದರೂ ಗ್ರಂಥವೆಂದು ಹೇಳಬಹುದು. ಹಾಗೆಯೇ ಉಳಿದ ಐದುಶಾಸ್ತ್ರಗಳನ್ನು ಶಾಸ್ತ್ರವೆಂದು ಹೇಳಬಹುದು ಅಥವಾ ಪುಸ್ತಕಗಳೆಂದು ಸಹ ಹೇಳಬಹುದು. ಸಮಾಚಾರವನ್ನು ಬರೆಯಲ್ಪಟ್ಟಿರುವುದನ್ನು ಪುಸ್ತಕ ಎಂದಾಗಲಿ, ಗ್ರಂಥ ಎಂದಾಗಲಿ ಕರೆಯಬಹುದು. ಅದರಲ್ಲಿರುವ ಸಮಾಚಾರವನ್ನನುಸರಿಸಿ ಅದು ಗ್ರಂಥಕ್ಕೆ ಸಂಬಂಧಿಸಿರುವುದೋ ಇಲ್ಲವೆ ಪುಸ್ತಕಕ್ಕೆ ಸಂಬಂಧಿಸಿರುವುದೋ ನೋಡಿ ಹೇಳಬಹುದು. ಗ್ರಂಥಗಳು ಪುಸ್ತಕಗಳು ಎಂಬ ಎರಡು ಗುಂಪಿನೊಳಗೆ ಶಾಸ್ತ್ರಗಳೆಂಬುವವು ಬೆರೆಯುವು ದರಿಂದ ಪ್ರಪಂಚ ಸಂಬಂಧ ಐದು ಶಾಸ್ತ್ರಗಳು ಪುಸ್ತಕಗಳಾಗುತ್ತಿವೆ. ಭಗವದ್ಗೀತೆ, ಬೈಬಲ್, ಖುರ್‌ಆನ್ ಎಂಬ ಮೂರು ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿರುವವೇ

ಆದರೂ, ಅವುಗಳನ್ನು ಧರ್ಮ ಶಾಸ್ತ್ರಗಳೆಂದು ಕರೆದರೂ, ಕೊನೆಗೆ ಆ ಮೂರು ಶಾಸ್ತ್ರಗಳನ್ನು ಗ್ರಂಥಗಳಾಗಿ ಕರೆಯುತ್ತಿದ್ದೇವೆ. ಪುಸ್ತಕಗಳು, ಶಾಸ್ತ್ರಗಳು, ಗ್ರಂಥಗಳು ಎಂದು ಮೂರು ವಿಧಗಳಾಗಿದ್ದರೂ ಅವುಗಳಲ್ಲಿನ ಶಾಸ್ತ್ರಗಳು ಸಮಾಚಾರ ವನ್ನನುಸರಿಸಿ ಇತ್ತ ಪುಸ್ತಕದೊಳಗಾದರೂ, ಇಲ್ಲವೆ ಅತ್ತ ಗ್ರಂಥಗಳೊಳಗಾದರೂ ಬೆರೆತು ಹೋಗುತ್ತಿವೆ.

ಈಗ ಪುಸ್ತಕವೊಂದರ ಅರ್ಥವನ್ನು, ಗ್ರಂಥವೊಂದರ ಅರ್ಥವನ್ನು ಕುರಿತು ತಿಳಿದುಕೊಳ್ಳೋಣ. ಮೊದಲು ಪುಸ್ತಕವನ್ನು ಕುರಿತು ತಿಳಿದುಕೊಳ್ಳೋಣ. ಪುಸ್ತಕ ಎಂಬ ಹೆಸರು ಪೂರ್ವದಲ್ಲಿ **'ಗುಸ್ತಕವಾಗಿ'** ಇತ್ತು. 'ಗುಸ್ತಕ' ಎಂಬ ಹೆಸರು ಕಾಲಕ್ರಮವಾಗಿ ಹೇಳುವುದರಲ್ಲಿ **"ಪುಸ್ತಕ"ವಾಗಿ** ಬದಲಾಗಿಹೋಗಿದೆ. ಗುಸ್ತಕವನ್ನು ವಿಂಗಡಿಸಿ ನೋಡಿದರೆ **'ಗು+ಹಸ್ತಕ=ಗುಸ್ತಕ'** ಎಂದು ಇದೆ. **"ಗು"** ಎಂದರೆ ಗುಣಗಳು ಎಂದು ಅರ್ಥ. **'ಹಸ್ತಕ'** ಎಂದರೆ ಅಧೀನದಲ್ಲಿ ಇರುವುದೆಂದು ಅರ್ಥ. ನಾವು ಮಾತನಾಡುವಾಗ ಆತನ ಆಸ್ತಿ ಎಲ್ಲವೂ ಧನಿಕನ ಹಸ್ತಗತವಾಗಿ ಹೋಗಿದೆ ಎಂದು ಅನ್ನುತ್ತಿರುತ್ತೇವೆ. 'ಹಸ್ತ' ಎಂದರೆ 'ಕೈ' ಎಂದು ಅರ್ಥ. ಹಸ್ತಕ ಎಂದರೂ, ಹಸ್ತಗತ ಎಂದರೂ ಅಧೀನದಲ್ಲಿರುವುದೆಂದು ಅರ್ಥ. "ಗು" ಎಂದರೆ ಗುಣಗಳಾದಾಗ ಗುಣಗಳ ಪ್ರಭಾವದಿಂದಲೇ ಬರೆಯಲ್ಪಟ್ಟಿರುವು ದೇನಾದರೂ, ಗುಣಗಳ ಹಸ್ತಗತದಲ್ಲಿ ಇರುವುದೇ ಆದ್ದರಿಂದ ಅದನ್ನು 'ಗುಸ್ತಕ' ಎನ್ನುತ್ತಿದ್ದರು. ಗುಸ್ತಕದಲ್ಲಿನದು ಏನಾದರೂ ಮಸ್ತಕದಲ್ಲಿನದೆಂದು ಹೇಳುತ್ತಿದ್ದರು, ಮಸ್ತಕದಲ್ಲಿರುವುದು ಗುಣಗಳೇ ಆದ್ದರಿಂದ ಗುಸ್ತಕ ಎಂಬ ಮಾತು ಪೂರ್ತಿ ಅರ್ಥದಿಂದ ಸರಿಹೋಗುತ್ತಿತ್ತು, ಆದರೆ ನಂತರ ಕಾಲದಲ್ಲಿ ಗುಸ್ತಕ ಪುಸ್ತಕವಾಗಿ ಬದಲಾಗಿಹೋಗಿ ಈದಿನ ಎಲ್ಲರೂ ಪುಸ್ತಕವೇ ಎನ್ನುತ್ತಿದ್ದಾರೆ. ಈದಿನ ನಮ್ಮಿಂದ ಹೇಳಲ್ಪಡುವ ಪುಸ್ತಕ ಎಂಬ ಮಾತು ಪೂರ್ವದಲ್ಲಿ ಗುಸ್ತಕವಾಗಿರುತ್ತಿತ್ತು ಅಂದರೆ, ತಿಳಿಯದವರಿಗೆ ಅದು ಸ್ವಲ್ಪ ಆಶ್ಚರ್ಯವೇ! ಆದರೂ, ಪುಸ್ತಕ ಪೂರ್ವದ ಒಂದುಕಾಲದಲ್ಲಿ ಗುಸ್ತಕವಾಗಿರುವ ಮಾತು ನಿಜವೇ ಎಂದು ತಿಳಿಯಬೇಕು.

ಇನ್ನು ಗ್ರಂಥ ಎಂಬ ಹೆಸರೊಂದರ ವಿವರವನ್ನು ತಿಳಿದುಕೊಂಡರೆ ಹೀಗೆ ಇದೆ. ಒಂದು ಬ್ರಹ್ಮವಿದ್ಯಾಶಾಸ್ತ್ರ ಒಂದರ ವಿಷಯಗಳಿರುವುದನ್ನು ಮಾತ್ರ ಗ್ರಂಥ ಎನ್ನುತ್ತಿದ್ದೇವೆ. ಶಾಸ್ತ್ರವಾಗಿರುವುದೇ ಗ್ರಂಥವಾಗುವುದಕ್ಕೆ ಅವಕಾಶವಿದೆ. ಧರ್ಮಶಾಸ್ತ್ರ ಅಥವಾ ಬ್ರಹ್ಮವಿದ್ಯಾಶಾಸ್ತ್ರ ಎನ್ನುವ ಭಗವದ್ಗೀತೆಯನ್ನು ಗ್ರಂಥ ಎಂದು ಹೇಳಬಹುದು. ಭಗವದ್ಗೀತೆ ಆಧ್ಯಾತ್ಮಿಕ ವಿದ್ಯೆಯನ್ನು ಬೋಧಿಸುತ್ತಿದೆ. ಆಧ್ಯಾತ್ಮಿಕವನ್ನು ಬೋಧಿಸುವ ಯಾವ ಗ್ರಂಥವಾದರೂ ಅದನ್ನು ಗ್ರಂಥವೆನ್ನಬೇಕಾಗಿ ಬರುತ್ತಿದೆ. ಆಧ್ಯಾತ್ಮಿಕ ಎಂದರೆ ಆತ್ಮಕ್ಕೆ ಸಂಬಂಧಿಸಿರುವದೆಂದು ಅರ್ಥ. ಆತ್ಮಕ್ಕೆ ಸಂಬಂಧಿಸಿದ ವಿಷಯವೆಲ್ಲವೂ ಶರೀರದಲ್ಲಿಯೇ ಇರುತ್ತದೆ. ಶರೀರದಲ್ಲಿನ ಆತ್ಮ ಗ್ರಂಥಿಗಳಲ್ಲಿ ವ್ಯಾಪಿಸಿದ್ದು, ತನ್ನ ಕಾರ್ಯಗಳನ್ನು ಮಾಡುತ್ತಿದೆ. ಮನುಷ್ಯ ತಲೆ ಮಧ್ಯಭಾಗದಲ್ಲಿರುವ ಪಿಟ್ಯೂಟರಿ ಗ್ಲಾಂಡನ್ನು ಕನ್ನಡದಲ್ಲಿ “ಗ್ರಂಥಿರಾಜ” ಎನ್ನುತ್ತೇವೆ. ಗ್ರಂಥಿರಾಜ ಎಂಬ ಗ್ರಂಥಿಯನ್ನು ಕೇಂದ್ರವಾಗಿ ಮಾಡಿಕೊಂಡು ಇತ್ತ ಗ್ರಂಥಿಗಳಲ್ಲಿಯೂ ಅತ್ತ ನಾಡಿಗಳಲ್ಲಿಯೂ ಆತ್ಮ ಶರೀರವೆಲ್ಲಾ ವ್ಯಾಪಿಸಿದೆ. ಶರೀರದಲ್ಲಿನ ಗ್ರಂಥಿಗಳಿಗೆಲ್ಲ ರಾಜನಂತಹದಾದ ಗ್ರಂಥಿ, ಸ್ವತಃವಾಗಿ “ಗ್ರಂಥಿ ರಾಜ’ ಎಂದು ಕರೆಯಲ್ಪಡುವ ಗ್ರಂಥಿಯನ್ನು ಕೇಂದ್ರೀಕರಿಸಿ, ಶರೀರವನ್ನು ನಡೆಸುತ್ತಿರುವ ಆತ್ಮ ವಿಷಯಗಳು ಯಾವುದಲ್ಲಾದರೆ ಬರೆಯಲ್ಪಟ್ಟಿರುತ್ತವೋ ಅದನ್ನು ಗುಸ್ತಕ ಎಂದಾಗಲಿ, ಪುಸ್ತಕ ಎಂದಾಗಲಿ ಅನ್ನುವುದಕ್ಕೆ ಸಾಧ್ಯವಿಲ್ಲ. ಅದರಲ್ಲಿರುವ ವಿಷಯ ಗ್ರಂಥಗಳಿಗೆ ಸಂಬಂಧಿಸಿದ ವಿಷಯವಾದ್ದರಿಂದ, ಅದನ್ನು ಗ್ರಂಥ ಎಂಬ ಅರ್ಥದಿಂದ ಕೂಡಿಕೊಂಡ ಹೆಸರಿನಿಂದ ಕರೆಯುವುದು ನಡೆದಿದೆ. ಆಧ್ಯಾತ್ಮಿಕಕ್ಕೆ ಸಂಬಂಧಿಸಿದ ವಿಷಯಗಳಿರುವುದರಿಂದ ಭಗವದ್ಗೀತೆಯಾಗಲಿ, ಬೈಬಲ್ ಆಗಲಿ, ಖುರ್‌ಆನ್ ಆಗಲಿ ಅರ್ಥಸಹಿತವಾಗಿ ಗ್ರಂಥ ಎನ್ನುವುದು ಸರಿಯಾದ ಮಾತಾಗುತ್ತದೆ. ಇದರಿಂದ ಗುಣಗಳಿಂದ ಕೂಡಿಕೊಂಡಿರುವವು ಪುಸ್ತಕಗಳು (ಗುಸ್ತಕಗಳು) ಎಂದೂ, ಆಧ್ಯಾತ್ಮಿಕದಿಂದ ಕೂಡಿಕೊಂಡಿರುವವು ಗ್ರಂಥಗಳು ಎಂದೂ ಅವುಗಳ ಭಾವಗಳು ತಿಳಿದ ಹಿರಿಯರು ಕರೆಯುವುದು ನಡೆಯುತ್ತಿದೆ. ಆ ವಿಧಾನದ ಪ್ರಕಾರ ನಮಗೆ ಧರ್ಮಶಾಸ್ತ್ರಗಳಾದ, ಅಥವಾ ಬ್ರಹ್ಮವಿದ್ಯಾ ಶಾಸ್ತ್ರಗಳಾದ ಭಗವದ್ಗೀತೆ, ಬೈಬಲ್, ಖುರ್‌ಆನ್ ಎಂಬ ಮೂರು,

ಮೂರು ಗ್ರಂಥಗಳಾಗಿ ಕರೆಯಲ್ಪಡುತ್ತಿವೆ. ಧರ್ಮಶಾಸ್ತ್ರ ಅಲ್ಲದಿರುವವು, ಪ್ರಪಂಚ ಶಾಸ್ತ್ರಕ್ಕೆ ಸಂಬಂಧಿಸಿರುವವು ಆದ ಐದು ಶಾಸ್ತ್ರಗಳನ್ನು ಪುಸ್ತಕಗಳೆಂದು ಹೇಳಬಹುದು. ನಾಲ್ಕು ವೇದಗಳು, ಹದಿನೆಂಟು ಪುರಾಣಗಳು, ಎಷ್ಟೋ ಕಾವ್ಯಗಳು, ಚರಿತ್ರೆಗಳು ಮೊದಲಾದವೆಲ್ಲ ಪುಸ್ತಕಗಳೇ ಆಗುತ್ತವೆ. ಅವು ಆಧ್ಯಾತ್ಮಿಕಕ್ಕೆ ಸಂಬಂಧಿಸಿರುವವು ಅಲ್ಲ. ಆದ್ದರಿಂದ ಅವುಗಳೆಲ್ಲವನ್ನು ಪುಸ್ತಕಗಳೇ ಅನ್ನಬೇಕು.

ಗ್ರಂಥಗಳ ವಿಷಯಗಳಲ್ಲಿ ಆಧ್ಯಾತ್ಮಿಕಕ್ಕೆ ಸಂಬಂಧಿಸಿರುವವೆ ಗ್ರಂಥಗಳೆಂದು ತಿಳಿದುಹೋಗಿದೆ. ಪ್ರಪಂಚದಲ್ಲಿ ಎಷ್ಟು ಆಧ್ಯಾತ್ಮಿಕ ಗ್ರಂಥಗಳು ಇದ್ದರೂ, ಎಲ್ಲವುಗಳಿಗು ಮೂಲ ಗ್ರಂಥಗಳು ಮೂರು ಮಾತ್ರವೇ ಇವೆ. ಅವು ಒಂದು ಪ್ರಥಮ ದೈವಗ್ರಂಥ ಭಗವದ್ಗೀತೆ, ಎರಡು ದ್ವಿತೀಯ ದೈವಗ್ರಂಥ ಬೈಬಲ್, ಮೂರು ಅಂತಿಮ ದೈವಗ್ರಂಥ ಖುರ್‌ಆನ್ ಎಂಬ ಮೂರು ಗ್ರಂಥಗಳೇ ಎಂದು ಹೇಳಬಹುದು. ಪ್ರಥಮ ದೈವಗ್ರಂಥವಾದ ಭಗವದ್ಗೀತೆ ಇಲ್ಲಿಗೆ ಐದುಸಾವಿರ (5000) ವರ್ಷಗಳ ಪೂರ್ವದಲ್ಲಿ ಹುಟ್ಟಿದೆ. ಮಧ್ಯ ಗ್ರಂಥವಾದ ಬೈಬಲ್ ಎರಡುಸಾವಿರ (2000) ವರ್ಷಗಳ ಪೂರ್ವದಲ್ಲಿ ಹುಟ್ಟಿದೆ. ಅಂತಿಮ ದೈವಗ್ರಂಥವಾದ ಖುರ್‌ಆನ್ ಹದಿನಾಲ್ಕುನೂರು (1400) ವರ್ಷಗಳ ಪೂರ್ವದಲ್ಲಿ ಹುಟ್ಟಿದೆ. ಭಗವದ್ಗೀತೆಯನ್ನು ಶ್ರೀಕೃಷ್ಣನು ಹೇಳಿದ್ದಾನೆ, ಬೈಬಲನ್ನು ಯೇಸು ಹೇಳಿದ್ದಾನೆ. ಖುರ್‌ಆನನ್ನು ಜಿಬ್ರಯೇಲ್ ಹೇಳಿದ್ದಾನೆ. ಭಗವದ್ಗೀತೆಯನ್ನು ಹೇಳಿದ ಕೃಷ್ಣನು, ಬೈಬಲನ್ನು ಹೇಳಿದ ಯೇಸು ಇಬ್ಬರೂ ಮನುಷ್ಯರೆ, ಖುರ್‌ಆನ್‌ನನ್ನು ಹೇಳಿದ ಜಿಬ್ರಯೇಲ್ ಮಾತ್ರ ಮನುಷ್ಯನಲ್ಲ. ಜಿಬ್ರಯೇಲ್ ಖಗೋಳದಲ್ಲಿನ ಒಂದು ಗ್ರಹ. ಕೃಷ್ಣನು, ಯೇಸು ಇಬ್ಬರೂ ಮಾನವಾಕಾರ ದಲ್ಲಿರುವ ವ್ಯಕ್ತಿಗಳೇ. ಆದರೆ ಖುರ್‌ಆನ್‌ನನ್ನು ಹೇಳಿದವನು ವ್ಯಕ್ತಿಯಲ್ಲ, ಮಾನವಾಕಾರದಲ್ಲಿ ಇಲ್ಲದ ಗ್ರಹ ಎಂದು ಹೇಳಿಕೊಂಡಿದ್ದೇವೆ. ಜಿಬ್ರಯೇಲ್ ಯಾರೆಂಬ ವಿಷಯ ಇಲ್ಲಿಯವರೆಗು ಯಾರಿಗೂ ತಿಳಿದಿಲ್ಲ. ಆತನು ಒಬ್ಬ ದೇವದೂತ ಎಂಬ ವಿಷಯ ಮಾತ್ರ ಎಲ್ಲರಿಗೂ ತಿಳಿದಿದೆ. ಆದರೆ ಆತನ ಸ್ವರೂಪವೇನು? ಸ್ವಭಾವೇನು? ಎಂಬ ವಿಷಯ ಯಾರಿಗೂ ತಿಳಿದಿಲ್ಲ. ಆತನು

ಒಬ್ಬ ದೂತ ಎಂಬ ವಿಷಯ ಎಲ್ಲರಿಗೂ ಇಲ್ಲವೆ ಕೆಲವರಿಗೂ ತಿಳಿದರೂ, ದೂತ ಎಂಬುವವನು ಹೇಗಿರುತ್ತಾನೆ? ಯಾರನ್ನು ದೂತನೆನ್ನಬೇಕು? ಎಂಬುವ ವಿಷಯ ನಮಗೆ ತಿಳಿದಿಲ್ಲ.

ದೇವರ ಕಾರ್ಯಗಳು ಮಾಡುವ ಪ್ರತಿಯೊಬ್ಬನನ್ನು ದೂತ ಎಂದೇ ಹೇಳಬಹುದು. ದೇವರ ಕೆಲಸಗಳು ಮಾಡುವವರೆಲ್ಲರನ್ನು ಸೇವಕರಾಗಿ ಹೇಳಬಹುದು. ಸೇವಕರನ್ನೇ ದೇವರ ಪ್ರತಿನಿಧಿಗಳಾಗಿ ಆತನ ಕಾರ್ಯವನ್ನು ಮಾಡುವವರಾಗಿ ಹೇಳಬಹುದು. ದೂತ ಎಂದರೆ ಪ್ರತ್ಯೇಕಿಸಿ ದೇವರ ಹತ್ತಿರದಿಂದ ಕಳಿಸಿದವನು ಎಂದು ಅರ್ಥ ಮಾಡಿಕೊಳ್ಳಬಾರದು. ದೇವರ ಕಾರ್ಯಗಳನ್ನು ಮಾಡುವವರೆಲ್ಲರನ್ನು ದೂತರು ಎಂದು ಹೇಳಬಹುದು. ಅಂತಹದರಲ್ಲಿ ದೇವರ ಹತ್ತಿರದಿಂದ ಕಳಿಸಲ್ಪಟ್ಟವರು ಸಹ ದೇವರ ಕೆಲಸವನ್ನೇ ಮಾಡುತ್ತಿರುವುದರಿಂದ, ಅವರನ್ನು ಸಹ ದೂತ ಎನ್ನುವುದರಲ್ಲಿ ತಪ್ಪಿಲ್ಲವಾಗಲಿ, ಅವರು ಮಾತ್ರವೇ ದೂತರು ಉಳಿದವರು ಅಲ್ಲ ಎನ್ನಬಾರದು. ಜಿಬ್ರಯೇಲ್ ದೇವರ ಜ್ಞಾನವನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳುವುದು ಎಂಬ ದೇವರ ಕೆಲಸ ಮಾಡಿದ್ದಾನೆ. ಆದ್ದರಿಂದ ಆತನನ್ನು ದೂತ ಎನ್ನುವುದರಲ್ಲಿ ತಪ್ಪಿಲ್ಲ. ಅದೇ ವಿಧವಾಗಿ ದೇವರಿಗೋಸ್ಕರ ಕೆಲಸಗಳು ಮಾಡಿದ ದೇವರ ಸೇವಕರೆಲ್ಲರನ್ನು ಸಹಾ ದೂತರೆಂದು ಅನ್ನಬಹುದು. ಕೃಷ್ಣನು, ಯೇಸು ಇಬ್ಬರೂ ಮನುಷ್ಯರೆ, ಅವರಲ್ಲಿ ಕೃಷ್ಣನು ಧನಿಕನು, ಭೋಗಪುರುಷನು. ಯೇಸು ಬಡವನು ಭೋಗಭಾಗ್ಯಗಳು ಯಾವುವು ಆತನಿಗೆ ಇಲ್ಲ. ಅವರ ಜೀವನಗಳನ್ನು ಗಮನಿಸಿದರೆ ಒಂದಕ್ಕೊಂದು ಯಾವ ಹೋಲಿಕೆಯಿಲ್ಲದೆ ಪೂರ್ವ, ಪಶ್ಚಿಮಗಳಾಗಿರುತ್ತವೆ. ಬಾಹ್ಯ ಜೀವನದಲ್ಲಿ ಎಂತಹ ಹೋಲಿಕೆಗಳು ಇಲ್ಲದಿದ್ದರೂ ಅವರು ಹೇಳಿದ ಜ್ಞಾನ ಮಾತ್ರ ಹತ್ತಿರ ಹೋಲಿಕೆಗಳಿರುವುದಾಗಿ ಇರುವುದರಿಂದ, ಅವರಿಬ್ಬರೂ ದೇವರ ಜ್ಞಾನವನ್ನೇ ಹೇಳಿರುವುದರಿಂದ, ಅವರಿಬ್ಬರನ್ನು ದೇವರ ದೂತರಾಗಿಯೇ ಹೇಳಬಹುದು. ಮನುಷ್ಯರಾದ ಕೃಷ್ಣನು, ಯೇಸು ಇಬ್ಬರೂ ದೂತರೇ ಅಗಿರುವಂತೆ ಖಗೋಳದಲ್ಲಿ ದೊಡ್ಡ ಗ್ರಹವಾದ ಜಿಬ್ರಯೇಲ್‌ನನ್ನು ಸಹ ದೂತ ಎಂದೇ ಅನ್ನುತ್ತಿದ್ದೇವೆ.

ದೊಡ್ಡ ಗ್ರಹವೆಂದು ಜಿಬ್ರಯೇಲ್‌ನನ್ನು, ಚಿಕ್ಕ ಮನುಷ್ಯರೆಂದು ಕೃಷ್ಣನನ್ನು, ಯೇಸುನನ್ನು ಬೇರೆಬೇರೆಯಾಗಿ ಏನಾದರೂ ಹೇಳಿದ್ದೀವಾ? ಇಲ್ಲವಲ್ಲ! ಎಂತಹವರಾದರೂ, ಯಾರಾದರೂ ದೇವರ ಕೆಲಸಗಳನ್ನು ಮಾಡುವವರನ್ನು ದೇವರ ಪ್ರತಿನಿಧಿಗಳಾಗಿ, ಅಥವಾ ದೇವರ ದೂತರಾಗಿ ಹೇಳಬಹುದು.

ದೇವರ ಜ್ಞಾನವನ್ನು ಹೇಳುವವನನ್ನು ಪ್ರವಕ್ತಯೆಂದು ಅನ್ನಬಹುದೆಂದು ಮೊದಲೇ **"ಪ್ರವಕ್ತರು ಯಾರು"** ಎಂಬ ಗ್ರಂಥದಲ್ಲಿ ಹೇಳಿಕೊಂಡಿದ್ದೇವೆ. ಅದನ್ನನುಸರಿಸಿ ಪ್ರತ್ಯೇಕಿಸಿ ಪ್ರವಕ್ತ ಎಂಬುವವನು ಒಬ್ಬನೇ ಇರುವುದಿಲ್ಲವೆಂದು, ಪದ್ಧತಿ ಪ್ರಕಾರ ದೇವರ ಜ್ಞಾನವನ್ನು ಹೇಳುವ ಯಾರನ್ನಾದರೂ ಆಗಲಿ ಪ್ರವಕ್ತಯೆಂದು ಹೇಳಬಹುದೆಂದು ಹೇಳಿಕೊಂಡಿದ್ದೇವೆ. ಹಾಗೆಯೇ ದೂತ ಎಂಬುವವನು ಪ್ರತ್ಯೇಕವಾಗಿ ಇರುವುದಿಲ್ಲವೆಂದು, ದೇವರ ಕೆಲಸವನ್ನು ಮಾಡುವ ಪ್ರತಿಯೊಬ್ಬನು ದೇವರ ದೂತನಾಗಿಯೇ ಪರಿಗಣಿಸಲ್ಪಡುತ್ತಾನೆಂದು ಹೇಳ ಬಹುದು. ಅಸಲು ವಿಷಯಕ್ಕೆ ಬಂದು ನೋಡಿದರೆ ಭಗವದ್ಗೀತೆಯನ್ನು ಹೇಳಿದ ಕೃಷ್ಣನು, ಬೈಬಲನ್ನು ಹೇಳಿದ ಯೇಸು ಇಬ್ಬರನ್ನು ಮೊದಲು ಬೋಧಕರೆಂದೇ ಹೇಳಬಹುದು. ಬೋಧಕರನ್ನೇ ಪ್ರವಕ್ತರು ಎಂದು ಸಹ ಅನ್ನಬಹುದು. ಹಾಗೆಯೇ ದೊಡ್ಡ ಗ್ರಹವಾದ ಜಿಬ್ರಯೇಲ್ ಸಹ ದೇವರ ಜ್ಞಾನವನ್ನು ಭೂಮಿಮೇಲೆ ಹೇಳಿರುವುದರಿಂದ ಆತನನ್ನು ಸಹ ಬೋಧಕನು ಎಂದು ಹೇಳಬಹುದು. ಹಾಗೆಯೇ ಪ್ರವಕ್ತಯೆಂದು ಸಹ ಹೇಳಬಹುದು. ನೀವು ಮೂವರು ದೇವರ ಕೆಲಸವನ್ನೇ ಮಾಡಿರುವುದರಿಂದ ಮೂವರನ್ನು ದೇವರ ದೂತರೆಂದು ಸಹ ಹೇಳಬಹುದು. ಇನ್ನೂ ಇವರಲ್ಲಿ ಏನಾದರೂ ತಾರತಮ್ಯಗಳು (ಬೇಧಗಳು) ಇವೆಯಾ! ಎಂದು ನೋಡಿದಂತಾದರೆ ಈ ಮೂವರಲ್ಲಿ ಯಾರಾದರೂ ಗುರುಗಳಿದ್ದಾರಾ! ಎಂಬ ಪ್ರಶ್ನೆಬರಬಹುದು. ಪ್ರವಕ್ತ, ದೂತ, ಬೋಧಕ ಎಂಬ ಹೆಸರುಗಳು ಸಮಾನವೆ ಆದರೂ ಸಹ, ಗುರು ಎಂಬುದು ಪ್ರತ್ಯೇಕವಾದ ಹೆಸರು. ಯಾರಾದರೂ ಪ್ರವಕ್ತರಾಗಿ, ಅಥವಾ ದೂತರಾಗಿ, ಅಥವಾ ಬೋಧಕರಾಗಿ ಕರೆಯಬಹುದೇ ಹೊರತು ಗುರುಗಳಾಗಿ ಕರೆಯಲ್ಪಡುವುದಿಲ್ಲ.

ಏಕೆಂದರೆ! ಗುರು ಸಾಕ್ಷ್ಯಾತ್ತೂ ದೇವರಿಗೆ ಸಮಾನವಾದವನು ಆದ್ದರಿಂದ, ಒಬ್ಬ ಪ್ರವಕ್ತನನ್ನು ಈತನು ಗುರುವಾ! ಅಲ್ಲವಾ! ಎಂದು ನೋಡಬೇಕಾಗಿ ಬರುತ್ತದೆ. ಹಾಗೆಯೇ ಒಬ್ಬ ದೇವದೂತನನ್ನು ಸಹ ಈತನು ಗುರು ಎಂಬ ಪದಕ್ಕೆ ಅರ್ಹನಾ! ಅಲ್ಲವಾ! ಎಂದು ನೋಡಬೇಕಾಗಿ ಬರುತ್ತಿದೆ. ಹಾಗೆ ಬೋಧಕನು ಯಾರಾದರೂ ಆಗಲಿ ಆತನು ಗುರುವೊ! ಅಲ್ಲವೊ! ಪರೀಕ್ಷಿಸಿ ನೋಡಬೇಕಾಗಿದೆ. ಈ ವಿಧವಾಗಿ ಪ್ರವಕ್ತರು, ದೂತರು, ಬೋಧಕರಲ್ಲಿ ಯಾರಾದರೂ ಗುರುಗಳಿದ್ದಾರಾ! ಎಂದು ನೋಡಬೇಕು. ಹಾಗೆ ನೋಡಿದರೂ ಗುರು ಎಂಬುವವನು ಅಷ್ಟು ಸುಲಭವಾಗಿ ಗುರುತಿಸಲ್ಪಡುವುದಿಲ್ಲ.

ಗುರುವು ಗುರುತಿಸಲ್ಪಡದವನಾದರೂ ಗುರು ದೇವರಿಗೆ ಸಮಾನವೆಂದು, ಗುರು ಸ್ವತಃವಾಗಿ ಬೋಧಿಸುತ್ತಾನೆಂದು, ಗುರುವು ಇತರರನ್ನು ಅನುಸರಿಸುವುದಿಲ್ಲವೆಂದು ತಿಳಿಯುವುದರಿಂದ ಇರುವವರಲ್ಲಿ ಯಾರಿಗೆ ಗುರು ಒಂದರ ಲಕ್ಷಣಗಳಿವೆಯೋ ನೋಡಿ ತಿಳಿದುಕೊಳ್ಳಬಹುದು. ಈಗ ಮೂರು ಗ್ರಂಥಗಳನ್ನು ಹೇಳಿದ ಮೂವರಲ್ಲಿ ಇಬ್ಬರು ವ್ಯಕ್ತಿಗಳಿರುವಾಗ, ಒಬ್ಬರು ಗ್ರಹವಾಗಿದ್ದಾರೆ. ಕೃಷ್ಣನು, ಯೇಸು ಇಬ್ಬರು ವ್ಯಕ್ತಿಗಳಾಗಿದ್ದು, ಜಿಬ್ರಯೇಲ್ ಕಾಣಿಸುವ ವ್ಯಕ್ತಿಯೇ ಅಲ್ಲ. ವ್ಯಕ್ತಿ ಎಂದರೆ ವ್ಯಕ್ತವಾಗುವವನು, ಕಾಣಿಸುವವನೆಂದು ಅರ್ಥ. ಒಬ್ಬ ವ್ಯಕ್ತಿಯಲ್ಲದ ಜಿಬ್ರಯೇಲ್‌ನನ್ನು ವಕ್ತ, ಪ್ರವಕ್ತ, ದೂತ, ಪ್ರದೂತ ಯೆಂದು ಹೇಳಿದರೂ ಆತನು ಗುರುವಾ! ಅಲ್ಲವಾ! ಎಂದು ನೋಡಬೇಕಾದ ಅವಶ್ಯಕತೆ ಇದೆ. ಜೀಬ್ರಯೇಲ್ ಯಾರಾಗಿರುವುದು ತಿಳಿದರೆ ಆತನು ಹೇಳಿದ ಬೋಧನೆ ಎಂತಹದೊ ತಿಳಿಯಬಹುದು. ಆದಕಾರಣ ಜಿಬ್ರಯೇಲ್ ಕುರಿತು ತಿಳಿದುಕೊಳ್ಳೋಣ. ಮನುಷ್ಯರಿಗೂ ದೇವರಿಗೂ ಮಧ್ಯದಲ್ಲಿ ಸಂಬಂಧವಾಗಿರು ವುದು ದೇವರ ಜ್ಞಾನವೆಂದು ಹೇಳಿಕೊಂಡಿದ್ದೇವೆ. ದೇವರಿಗೂ ಮನುಷ್ಯನಿಗೂ ಮಧ್ಯದಲ್ಲಿ ಸಂಬಂಧ ಬಾಂಧವ್ಯಗಳು ಕಲ್ಪಿಸುವ ಜ್ಞಾನವನ್ನು ಮೊದಲು ಪ್ರಜೆಗಳಿಗೆ ದೇವರೇ ಹೇಳಿದ್ದಾನೆ. ದೇವರು ಭೂಮಿಮೇಲೆ ಪ್ರಜೆಗಳಿಗೆ ಮೂರು ವಿಧಗಳಾಗಿ ತನ್ನ ಜ್ಞಾನವನ್ನು ತಿಳಿಸಿದ್ದಾನೆಂದು **ಪವಿತ್ರ ಖುರ್‌ಆನ್ ಗ್ರಂಥದಲ್ಲಿ 42ನೇ**

**ಸೂರಾ, 51ನೇ ಆಯತ್‌ನಲ್ಲಿ** ಹೇಳಿದ್ದಾನೆ. ಅದು ಈ ವಿಧವಾಗಿ ಇದೆ. **"ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ, ದೇವರು ತನ್ನ ಜ್ಞಾನವನ್ನು ಒಂದು ವಹಿ ಮೂಲಕ (ವಾಣಿ ಮೂಲಕ) ತಿಳಿಸುವನು, ಎರಡು ತೆರೆ ಹಿಂಬದಿಯಿಂದ ತಿಳಿಸುವನು. ಮೂರು ತನ್ನ ದೂತನ ಮೂಲಕ (ತನ್ನ ಪ್ರತಿನಿಧಿ ಮೂಲಕ) ಜ್ಞಾನವನ್ನು ತನ್ನ ಆಜ್ಞಾನುಸಾರ ತಿಳಿಸುತ್ತಾನೆ. ಆತನು ಮಹೋನ್ನತನು, ವಿವೇಕವಂತನು"** ಎಂದು ಇದೆ. ಈ ವಾಕ್ಯವನ್ನು ಜಿಬ್ರಯೇಲ್ ಪ್ರವಕ್ತರಾದ ಮುಹಮ್ಮದ್‌ರವರಿಗೆ ತಿಳಿಸಿದ್ದಾನೆ. ಈ ವಿಷಯವನ್ನು ಮೊದಲು ದೇವರು ಹೇಳಿದರೆ, ಅದನ್ನೇ ಜಿಬ್ರಯೇಲ್ ಎರಡನೇ ವ್ಯಕ್ತಿಯಾಗಿ ಪ್ರವಕ್ತರಿಗೆ ಹೀರಾಗುಹೆ ಗಳಲ್ಲಿ ತಿಳಿಸಿದ್ದಾನೆ. ಹೇಳಿರುವುದು ಜಿಬ್ರಯೇಲ್ ಆದರೂ ವಾಕ್ಯವೆಲ್ಲವೂ, ವಾಕ್ಯದಲ್ಲಿನ ಸಾರಾಂಶವೆಲ್ಲವೂ ದೇವರದೇ.

ಇಲ್ಲಿ ಜಿಬ್ರಯೇಲ್ ಹೇಳಿದ ವಾಕ್ಯದಲ್ಲಿ ದೇವರು ತನ್ನ ಜ್ಞಾನವನ್ನು ಶಬ್ಧದ ಮೂಲಕ, ಆಕಾಶವಾಣಿ ಮೂಲಕ ತಿಳಿಸುತ್ತೇನೆಂದು ಹೇಳಿದ್ದಾನೆ. ಇಲ್ಲಿ ಚೆನ್ನಾಗಿ ವಿವರವಾಗಿ ತಿಳಿಯಲುಕೋರಿದರೆ ದೇವರು ಮನುಷ್ಯರಿಗೆ ಜ್ಞಾನವನ್ನು ತಿಳಿಸಬೇಕೆಂದು ಸಂಕಲ್ಪಿಸಿಕೊಂಡಿದ್ದಾನೆ. ದೇವರು ಅಂದು ಕೊಳ್ಳುವವನೆ ಆದರೆ ಮಾಡುವವನಲ್ಲ. ಹಾಗೆ ದೇವರು ಅಂದುಕೊಂಡ ತಕ್ಷಣವೇ ಆತನ ಕೆಲಸವನ್ನು ಮಾಡುವುದಕ್ಕೆ ಮೊದಲು ಅವಕಾಶ ಇರುವವರು ಮಹಾಭೂತಗಳು, ನಂತರ ಭೂತಗಳು, ಉಪಭೂತಗಳು, ಗ್ರಹಗಳು, ಉಪಗ್ರಹ ಗಳು ಒಬ್ಬರ ನಂತರ ಒಬ್ಬರು ಅವಕಾಶಕ್ಕೋಸ್ಕರಕ್ಕಾಗಿ ನೋಡುತ್ತಿರುತ್ತಾರೆ. ಅಂತಹ ಸ್ಥಿತಿಯಲ್ಲಿರುವ ದೇವರ ಪಾಲನೆಯಲ್ಲಿನ ಮಹಾಭೂತವಾದ ಆಕಾಶ ಮೊದಲು ದೇವರ ಜ್ಞಾನವನ್ನು ಸ್ವತಃವಾಗಿ ಶಬ್ಧರೂಪವಾಗಿ ಹೊರಗೆ ಕಳಿಸಿದೆ. ಆಗ ಆ ಶಬ್ದವನ್ನು ಖಗೋಳದಲ್ಲಿ ಆಕಾಶಕ್ಕೆ ಸಮೀಪದಲ್ಲಿರುವ ಸೂರ್ಯನು ಕೇಳುವುದು ನಡೆದಿದೆ. ನಂತರ ಆತನ ಮೂಲಕ ದೇವರಜ್ಞಾನ ಭೂಮಿಗೆ ಸೇರಿದೆ. ಭೂಮಿಗೆ ಸೂರ್ಯನ ಮೂಲಕ ಸೇರಿದ ಜ್ಞಾನ ಗ್ರಂಥರೂಪವಾಗಿ ಬರೆಯಲ್ಪಡಲಿಲ್ಲ. ಮೊದಲು ಆಕಾಶ ಶಬ್ಧದ ಮೂಲಕ ಒಂದು ವಿಧವಾಗಿ

ಜ್ಞಾನ ತಿಳಿಯಲ್ಪಟ್ಟರೆ, ಎರಡನೆ ವಿಧವಾಗಿ ತೆರೆ ಹಿಂಬದಿಯಿಂದ ಭೂಮಿಮೇಲೆ ಮನುಷ್ಯರಿಗೆ ತಿಳಿಸುವುದು ನಡೆದಿದೆ. ಎರಡನೆ ವಿಧಾನದಲ್ಲಿ ಸಹ ಶಬ್ಧವೇ ಜ್ಞಾನವನ್ನು ಹೇಳಿದರೂ ಆ ಶಬ್ಧ ತೆರೆ ಹಿಂಬದಿಯಿಂದ ಕಾಣಿಸದಂತೆ ಇರುವವನಿಂದ ಬಂದಿದೆ. ಅಲ್ಲಿ ಯಾರು ಮಾತನಾಡುವುದು ತಿಳಿಯದೆ, ಕೇವಲ ಮಾತುಗಳು ಮಾತ್ರ ಕೇಳಿಸಿರುವುದರಿಂದ ಅದನ್ನು ತೆರೆ ಹಿಂಬದಿಯಿಂದ ಹೇಳುವುದೆಂದು ವರ್ಣಿಸಿದ್ದಾರೆ. ತೆರೆ ಹಿಂಬದಿಯಿಂದ ಎಂದರೆ ಅಲ್ಲಿ ಬಟ್ಟೆ ತೆರೆಯಾಗಿದೆಯೇನೊ! ಎಂದು ಅಂದುಕೊಳ್ಳಬಾರದು. ಹೇಳುವವನು ಕಾಣಿಸಲಿಲ್ಲ ಆದ್ದರಿಂದ, ಅದನ್ನು ಅರ್ಥ ಮಾಡಿಕೊಳ್ಳುವುದಕ್ಕೆ ತೆರೆ ಹಿಂಬದಿಯಿಂದ ಎಂದು ಹೇಳುವುದು ನಡೆದಿದೆ.

**ಖುರ್‌ಆನ್‌ನಲ್ಲಿನ 42ನೇ ಸೂರಾ, 51ನೇ ಆಯತ್‌ನಲ್ಲಿನ** ಈ ವಾಕ್ಯವು ಸಹ ಹಾಗೆಯೇ ಮುಹಮ್ಮದ್ ಪ್ರವಕ್ತರಿಗೆ ಕೇಳಿಸಿದೆಯೆಂದು ತಿಳಿಯಬೇಕು. ಮುಹಮ್ಮದ್ ಪ್ರವಕ್ತರಿಗೆ ಕಾಣಿಸದಹಾಗೆ ಜ್ಞಾನವನ್ನು ಹೇಳಿದವನು ಜಿಬ್ರಯೇಲನೇ ಎಂದು ಜ್ಞಾಪಕವಿಟ್ಟುಕೊಳ್ಳಬೇಕು. ತೆರೆ ಹಿಂಬದಿಯಿಂದ ಎಂದು ಹೇಳಿದರೆ ಕಾಣಿಸದಹಾಗೆ ಹೇಳುವುದಾಗಿದೆಯೆಂದು ಅರ್ಥ ಮಾಡಿಕೊಳ್ಳಬೇಕು. ಬಹಳ ಜನ ಈ ವಾಕ್ಯದಲ್ಲಿ ತೆರೆ ಎಂದರೆ ಅಡ್ಡವಾಗಿ ಕಟ್ಟಿರುವ ಬಟ್ಟೆಯೆಂದು, ತೆರೆಹಿಂದೆ ಅಂದರೆ ಅಡ್ಡವಾಗಿ ಕಟ್ಟಿದ ಬಟ್ಟೆಯಹಿಂದಿನ ಭಾಗವೆಂದು ಅರ್ಥ ಮಾಡಿಕೊಳ್ಳುತ್ತಿದ್ದಾರೆ. ಹಾಗೆ ಇಲ್ಲಿಯವರೆಗೂ ಜ್ಞಾನವನ್ನು ಹೇಳುವವರು ಬಟ್ಟೆ ಹಿಂದಿನಿಂದ ಯಾವಾಗಲೂ ಹೇಳಲಿಲ್ಲ. ಹಾಗೆ ಹೇಳಬೇಕಾದ ಅವಶ್ಯಕತೆಯೂ ಇಲ್ಲ. ಇಲ್ಲಿ ಕಾಣಿಸದಂತೆ ಹೇಳಿರುವುದು ಜಿಬ್ರಯೇಲ್ ಗ್ರಹವೆ. ಜೀಬ್ರಯೇಲ್ ಎನ್ನುವತನು ಖಗೋಳದಲ್ಲಿ ಸ್ಥೂಲವಾಗಿರುವ ಒಂದು ದೊಡ್ಡ ಗೋಳ. ಗೋಳಾಕಾರವನ್ನು ಹೊಂದಿರುವ ಜಿಬ್ರಯೇಲ್ ಖಗೋಳದಲ್ಲಿ ಸೂರ್ಯನ ಹತ್ತಿರ ತಾನು ತಿಳಿದುಕೊಂಡ ಜ್ಞಾನವನ್ನು ಮನುಷ್ಯರಿಗೆ ತಿಳಿಸಬೇಕೆಂದುಕೊಂಡು, ಭೂಮಿಮೇಲೆ ಬಂದು ತಾನು ಜ್ಞಾನವನ್ನು ಹೇಳಬೇಕಾದ ವ್ಯಕ್ತಿಯನ್ನು ಆಯ್ಕೆಮಾಡಿಕೊಂಡು, ತನ್ನ ಜ್ಞಾನವನ್ನು ಮೊದಲಿನಿಂದ ಆ ವ್ಯಕ್ತಿಗೆ ಹೇಳುವುದು ನಡೆದಿದೆ. ಆದರೆ ಇಲ್ಲಿ ಗ್ರಹಿಸಬೇಕಾದ

ವಿಷಯವೇನೆಂದರೆ! ಜಿಬ್ರಯೇಲ್ ಶರೀರ ಒಂದು ಗೋಳಾಕೃತಿಯಲ್ಲಿರುವ ಗ್ರಹ. ಆದ್ದರಿಂದ ತನ್ನ ಸ್ಥೂಲಶರೀರವನ್ನು ಬಿಟ್ಟು ಸೂಕ್ಷ್ಮ ಶರೀರದಿಂದ ಭೂಮಿಮೇಲಕ್ಕೆ ಬಂದು, ಜ್ಞಾನವನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳಿದ್ದಾನೆ. ಆದರೆ ಮನುಷ್ಯ ಕಾಣಿಸದಹಾಗೆ ಮನುಷ್ಯನ ಶಬ್ದ ಮಾತ್ರ ಕೇಳಿಸಿರುವುದರಿಂದ ಮೊದಲು ಪ್ರವಕ್ತರು ಪೂರ್ತಿ ಭಯಪಟ್ಟುಹೋದರು. ಅದರಿಂದ ಪ್ರವಕ್ತರಿಗೆ ಕೆಲವು ದಿನಗಳು ಜ್ವರ ಬರುವುದು ಸಹ ನಡೆದಿದೆ. ನಂತರ ಎರಡನೆಬಾರಿ ಜಿಬ್ರಯೇಲ್ ತಾನು ಭಯವಿಡುವುದಕ್ಕೆ ಬರಲಿಲ್ಲವೆಂದು, ದೇವರಜ್ಞಾನವನ್ನು ಹೇಳುವುದಕ್ಕೆ ಬಂದಿದ್ದೇನೆಂದು ಮೊದಲೇ ಹೇಳಿರುವುದರಿಂದ, ಅಂದಿನಿಂದ ಮುಹಮ್ಮದ್ ಪ್ರವಕ್ತರು ಜಿಬ್ರಯೇಲ್ ಕಾಣಿಸದೆ ಮಾತನಾಡಿದ ಮಾತುಗಳೆಲ್ಲವನ್ನು ಜಾಗ್ರತೆಯಾಗಿ ಕೇಳಿದನು. ಆ ದಿನ ಜಿಬ್ರಯೇಲ್, ಅನ್ವೇಷಣೆಯಲ್ಲಿ ಅಲ್ಲಿರುವ ಪ್ರಜೆಗಳಲ್ಲಿ ಎಲ್ಲಾ ವಿಧಗಳ ಉತ್ತಮನು ಮುಹಮ್ಮದ್ ಪ್ರವಕ್ತರಾಗಿರುವುದರಿಂದ, ಮುಹಮ್ಮದ್ ಅವರಿಗೆ ಜ್ಞಾನವನ್ನು ಹೇಳಬೇಕೆಂದು ನಿರ್ಧಾರಿಸಿಕೊಂಡು ಜಿಬ್ರಯೇಲ್ ಜ್ಞಾನವನ್ನು ಹೇಳುವುದು ನಡೆದಿದೆ. ಆ ದಿನಗಳಲ್ಲಿ ಒಂಟಿಯಾಗಿ ಯಾರೂ ಇಲ್ಲದ ಸ್ಥಳದಲ್ಲಿರುವವನಿಗೆ ಜ್ಞಾನವನ್ನು ಹೇಳಬೇಕೆಂದುಕೊಂಡ ಜಿಬ್ರಯೇಲ್‌ಗೆ ಅಂತಹ ವ್ಯಕ್ತಿ ಒಬ್ಬ ಮುಹಮ್ಮದ್ ಪ್ರವಕ್ತರೇ ಎಂದು ತಿಳಿದು ಹೋಗಿದೆ. ಆಗಿನಕಾಲದಲ್ಲಿ ಮುಹಮ್ಮದ್ ಪ್ರವಕ್ತರು ತನ್ನ ನಿವಾಸಕ್ಕೆ ದೂರವಾಗಿರುವ ಹೀರಾ ಗುಹೆಗಳೊಳಗೆ ಹೋಗಿ ಒಂಟಿಯಾಗಿ ಕಾಲಕಳೆಯುತ್ತಾ ದೇವರನ್ನು ಕುರಿತು ಆಲೋಚಿಸುತ್ತಿದ್ದನು. ಊರಿಗೆ ದೂರವಾಗಿ ಯಾರೂ ಇಲ್ಲದಕಡೆ ಪ್ರವಕ್ತರು ಜಿಬ್ರಯೇಲ್‌ಗೆ ಕಾಣಿಸಿದಾಗ ಆತನಿಗೇ ತಾನು ಜ್ಞಾನವನ್ನು ಹೇಳುವುದಕ್ಕೆ ನಿರ್ಣಯಿಸಿಕೊಂಡನು. ಅಲ್ಲಿಗೆ ಮೂರು ವರ್ಷಗಳಿಂದ ಹೀರಾ ಬೆಟ್ಟದ ಗುಹೆಗಳಲ್ಲಿ ಪ್ರವಕ್ತರು ಏಕಾಂತವಾಗಿ ಕಳೆಯುತ್ತಿದ್ದರು. ಎರಡು ಮೂರು ದಿನಗಳು ಅಲ್ಲಿಯೇ ಇದ್ದು ಮನೆಗೆ ಬರುತ್ತಿದ್ದನು. ಏಕಾಂತವಾಗಿ ಇರುವ ಆತನಲ್ಲಿನ ದೈವಚಿಂತನೆಯನ್ನು ನೋಡಿದ ಜೀಬ್ರಯೇಲ್ ಆತನಿಗೇ ಜ್ಞಾನವನ್ನು ಹೇಳಬೇಕೆಂದು ನಿರ್ಣಯಿಸಿಕೊಳ್ಳುವುದು ನಡೆದಿದೆ. ಆಗ ರಂಜಾನ್ ತಿಂಗಳು 21ನೇ ತಾರೀಖು ಇರುವಾಗ ಕ್ರಿ.ಶ. 10–08–610 ಎಂದು ಚರಿತ್ರೆಯಲ್ಲಿ

ಬರೆದಿಟ್ಟಿದ್ದಾರೆ. ಪ್ರವಕ್ತರು ಜಿಬ್ರಯೇಲ್‌ನಿಂದ ಮೊದಲಬಾರಿ ಜ್ಞಾನವನ್ನು ಕೇಳಿ ಇಲ್ಲಿಗೆ 1404 ವರ್ಷಗಳು ಆಗಿದೆಯೆಂದು ತಿಳಿಯುತ್ತಿದೆ. ಆಗಿನಿಂದ ಆಗಾಗ ಜಿಬ್ರಯೇಲ್‌ನಿಂದ 23 ವರ್ಷಗಳು ಜ್ಞಾನವನ್ನು ಕೇಳಿದ್ದಾನೆ. ಪ್ರತಿದಿನ ಜಿಬ್ರಯೇಲ್ ಜ್ಞಾನವನ್ನು ಹೇಳುತ್ತಿರಲಿಲ್ಲ. ವಾರಕ್ಕೆ ಒಂದುಬಾರಿಯೋ, ಎರಡು ವಾರಗಳಿಗೊಂದು ಬಾರಿಯೋ ಬಂದು ಜ್ಞಾನವನ್ನು ಹೇಳುತ್ತಿದ್ದನು. ಒಂದೊಂದು ಬಾರಿ ಎರಡು ಮೂರು ತಿಂಗಳು ಸಹ ಮಧ್ಯದಲ್ಲಿ ಕಾಲ ಕಳೆಯುತ್ತಿತ್ತು. ಈ ವಿಧವಾಗಿ 23 ವರ್ಷಗಳು ಪ್ರವಕ್ತರಿಗೆ ಜಿಬ್ರಯೇಲ್ ಜ್ಞಾನವನ್ನು ಹೇಳುವುದಾಗಿದೆ.

ದುರದೃಷ್ಟವಶಾತ್ತು ಪ್ರವಕ್ತರು ಓದುಬಾರದವನಾಗಿರುವುದರಿಂದ ಜಿಬ್ರಯೇಲ್ ಹೇಳುವಮಾತುಗಳನ್ನು ಕೇಳಿದ ನಂತರ ಮನೆಗೆಹೋಗಿ ತನ್ನ ಅನುಚರರಿಗೆ ಹೇಳುತ್ತಿದ್ದನು. ಹಾಗೆ ಕೇಳಿರುವುದನ್ನು ಎಲ್ಲರೂ ಕೂಡಿ ಒಂದುಬಾರಿ ಖುರ್‌ಆನ್ ಗ್ರಂಥವಾಗಿ ಬರೆಯುವುದು ನಡೆದಿದೆ. ಅಲ್ಲಿರುವವರು ಅನೇಕ ದಿನಗಳು ಕೇಳಿರುವುದನ್ನು, ಕೆಲವರು ಬರೆದುಕೊಂಡಿರುವುದನ್ನು ಒಂದುಕಡೆ ಸೇರಿಸಿ ಖುರ್‌ಆನ್ ಗ್ರಂಥವಾಗಿ ಬರೆಯುವುದರಿಂದ ಖುರ್‌ಆನ್ ಗ್ರಂಥದಲ್ಲಿನ ವಿಷಯಗಳು ವರಸೆ ಕ್ರಮದಲ್ಲಿ ಇಲ್ಲದಹಾಗೆ ಇದೆ. ಯಾರಿಗೆ ಜ್ಞಾಪಕವಿರುವುದು ಅವರು ಹೇಳಿರುವುದರಿಂದ ಹೇಳಿದ ವಿಷಯಗಳನ್ನೇ ಎರಡು ಮೂರುಬಾರಿ ಖುರ್‌ಆನ್‌ನಲ್ಲಿ ಕಾಣಿಸುತ್ತಿರುತ್ತದೆ. ಅಷ್ಟೇಅಲ್ಲದೆ ಒಂದು ವಿಷಯವನ್ನು ಹೇಳಿದಾಗ ಅದಕ್ಕೆ ಕೆಳಗೆ ಅದರ ಅನುಬಂಧ ವಿಷಯವಿರುವುದಿಲ್ಲ. ಅಲ್ಲಿ ಬೇರೆ ವಿಷಯ ಬಂದಿದ್ದು, ಮೊದಲನೆಯದಕ್ಕೆ ಅನುಬಂಧ ವಿಷಯ ಮತ್ತೊಂದುಕಡೆ ಕಾಣಿಸುವುದು ನಡೆಯುತ್ತಿರುತ್ತದೆ. ಆದ್ದರಿಂದ ಖುರ್‌ಆನ್ ಗ್ರಂಥವನ್ನು ಓದುವವರಿಗೆ ಸ್ವಲ್ಪ ಹಿಂದೆಮುಂದಾಗುತ್ತದೆ. ಸಹನೆಯಿಂದ ಓದುಕೊಳ್ಳುವವರಿಗೆ ಅದರಲ್ಲಿ ದೈವಜ್ಞಾನ ಲಭ್ಯವಾಗುತ್ತದೆ.

ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ದೈವಜ್ಞಾನವನ್ನು ಹೇಳಿದ್ದಾನೆನ್ನುವುದು ವಾಸ್ತವವೇ. ಆಗ ಹೇಳಿರುವುದೇ ನಮ್ಮಮುಂದೆ ಖುರ್‌ಆನ್ ಗ್ರಂಥವಾಗಿ ಇರುವುದು ನಿಜವೇ. ಆದರೆ ಜಿಬ್ರಯೇಲ್ ಎನ್ನುವಾತನಿಗೆ ದೇವರ ಜ್ಞಾನ

ಹೇಗೆ ತಿಳಿದಿದೆ? ಎನ್ನುವ ಪ್ರಶ್ನೆ ಬರದೆ ಇರುವುದಿಲ್ಲ. ಇದಕ್ಕುಮೊದಲೇ ಜಿಬ್ರಯೇಲ್ ಸಾಧಾರಣ ಮನುಷ್ಯನಲ್ಲ ಎಂದು ಹೇಳಿಕೊಂಡಿದ್ದೇವೆ. ಜಿಬ್ರಯೇಲ್ ಖಗೋಳದಲ್ಲಿರುವ ಭೂತಗಳು, ಗ್ರಹಗಳಲ್ಲಿ ಒಂದು ದೊಡ್ಡ ಗ್ರಹ, ಗ್ರಹ ಎಂದರೆ ಗ್ರಹಿಸುವವನು ಅಥವಾ ಗ್ರಹಿಸುವುದೆಂದು ಅರ್ಥ. ಸೃಷ್ಟಿ ಆದಿಯಲ್ಲಿ ದೇವರು ತನ್ನ ಜ್ಞಾನವನ್ನು ಆಕಾಶವಾಣಿ ಮೂಲಕ (ವಹಿ ಮೂಲಕ) ತಿಳಿಸಿದಾಗ ಅದನ್ನು ಮೊದಲು ಕೇಳಿದವನು ಸೂರ್ಯನು. ಎರಡನೆಯವನು ಜಿಬ್ರಯೇಲ್. ಮೊದಲು ಕೇಳಿದ ಸೂರ್ಯನು ಭೂಮಿಮೇಲೆ ಮನುವಿಗೆ ಆ ಕಾಲದಲ್ಲಿಯೇ ತಿಳಿಸಿದ್ದಾನೆ ಎಂದು ಚರಿತ್ರೆ ಇದೆ. ಆಕಾಶವಾಣಿ ಮೂಲಕ ಬಂದಿರುವ ಜ್ಞಾನವನ್ನು ಕೇಳಿದ ಎರಡನೆಯವನು ಜಿಬ್ರಯೇಲ್ ಎಂದುಕೊಂಡಿದ್ದೇವೆ ಅಲ್ಲವೆ! ಆತನು ಭೂಮಿಮೇಲಕ್ಕೆ ಬಂದು ಮುಹಮ್ಮದ್ ಪ್ರವಕ್ತರಿಗೆ ಹೇಳುವುದು ನಡೆದಿದೆ. ಇಲ್ಲಿಗೆ 1400 ವರ್ಷಗಳು ಕೆಳಗೆ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳಿದ ಜ್ಞಾನ ಎಲ್ಲಿಯದು? ಎಂದು ಪ್ರಶ್ನಿಸಿದರೆ ಪ್ರಪಂಚದಲ್ಲಿ ಸೃಷ್ಠಿ ಆದಿಯಲ್ಲಿಯೇ ದೇವರು ಆಕಾಶವಾಣಿ ಮೂಲಕ ಹೇಳಿದ ಜ್ಞಾನವನ್ನೇ ಜಿಬ್ರಯೇಲ್ ತಿಳಿದುಕೊಂಡು ಅದನ್ನೇ ಹೇಳಿದ್ದಾನೆಂದು ಹೇಳಬಹುದು. ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳಿದ ಜ್ಞಾನವೂ, ದ್ವಾಪರಯುಗ ಅಂತ್ಯದಲ್ಲಿ ಕೃಷ್ಣನು ಅರ್ಜುನನಿಗೆ ಹೇಳಿದ ಜ್ಞಾನವೂ ಎರಡೂ ಒಂದೇಯೆಂದು ಹೇಳಬಹುದು. ಖಗೋಳದಲ್ಲಿ ಆಕಾಶದ ಮೂಲಕ ಸೃಷ್ಠಿ ಆದಿಯಲ್ಲಿಯೇ ಸೂರ್ಯನಿಗೆ ಹೇಳಿದ ಜ್ಞಾನವನ್ನು ಸೂರ್ಯನು ಆಗಿನಿಂದ ಪ್ರಪಂಚವೆಲ್ಲಾ ವ್ಯಾಪಿಸುವಂತೆ ಮಾಡುತ್ತಿದ್ದಾನೆ.

ಸೃಷ್ಠಿ ಆದಿಯಲ್ಲಿಯೇ ತನಗೆ ಜ್ಞಾನ ತಿಳಿದ ತಕ್ಷಣವೇ ಸೂರ್ಯನು ಭೂಮಿ ಮೇಲಕ್ಕೆ ಬಂದು ಕೃತಯುಗದಲ್ಲಿಯೇ ಮನುವು ಎಂಬ ಪ್ರಮುಖ ವ್ಯಕ್ತಿಗೆ ಹೇಳುವುದು ನಡೆದಿದೆ. ಮನುವು ತಾನು ಸೂರ್ಯನ ಮೂಲಕ ಕೇಳಿದ ಜ್ಞಾನವನ್ನು ಇಕ್ಷ್ವಾಕನೆಂಬ ರಾಜನಿಗೆ ತಿಳಿಸಿದ್ದಾನೆ. ಇಕ್ಷ್ವಾಕನೆಂಬ ರಾಜನು ಇತರ ರಾಜರಿಗೆ ತಿಳಿಸಿದ್ದಾನೆ. ಆಗ ಜ್ಞಾನವನ್ನು ಹಾಗೆ ಒಬ್ಬರಿಗೊಬ್ಬರು ಹೇಳಿಕೊಳ್ಳುವುದರಿಂದ ಪ್ರಪಂಚದಲ್ಲಿನ ಮನುಷ್ಯರೆಲ್ಲರಿಗೂ ತಿಳಿದುಹೋಗಿದೆ.

ನಂತರ ತ್ರೇತಾಯುಗ, ದ್ವಾಪರಯುಗ ಎರಡು ಯುಗಗಳು ಕಳೆದಾಗ, ಮೊದಲು ಎಲ್ಲರಿಗೂ ತಿಳಿದ ಜ್ಞಾನ ದ್ವಾಪರಯುಗದ ಕೊನೆಯಲ್ಲಿ ಎಲ್ಲರಿಗೂ ತಿಳಿಯದಹಾಗೆ ಹೋಗಿದೆಯೆಂದು ಕೃಷ್ಣನು ಅರ್ಜುನನೊಂದಿಗೆ ಹೇಳುವುದು ನಡೆದಿದೆ. ಅಲ್ಲಿಗೂ ಕೃತ, ತ್ರೇತಾ, ದ್ವಾಪರ ಎನ್ನುವ ಮೂರು ಯುಗಗಳ ಕಾಲಕ್ಕೆ ಸೂರ್ಯನು ಭೂಮಿಮೇಲೆ ತಿಳಿಸಿದ ಜ್ಞಾನ ಇಲ್ಲದಹಾಗೆ ಹೋಗುವುದು ನಡೆದಾಗ, ದ್ವಾಪರಯುಗ ಅಂತ್ಯದಲ್ಲಿ ಕೃಷ್ಣನು ಬಂದು ಆದಿಯಲ್ಲಿ ನಾನು ಸೂರ್ಯನಿಗೆ ಹೇಳಿದ ಜ್ಞಾನವನ್ನೆ ನಿನಗೆ ಈಗ ಹೇಳುತ್ತಿದ್ದೇನೆ ಕೇಳು! ಎಂದು ಪುನಃ ಮೊದಲ ಜ್ಞಾನವನ್ನು ಪೂರ್ತಿಯಾಗಿ ಭಗವದ್ಗೀತೆ ರೂಪದಲ್ಲಿ ಹೇಳುವುದು ನಡೆದಿದೆ.

ಸೃಷ್ಟಿ ಆದಿಯಲ್ಲಿ ಹೇಳಿದ ಜ್ಞಾನವನ್ನೇ ನಿನಗೆ ಈಗ ಹೇಳುತ್ತಿದ್ದೇನೆಂದು ಕೃಷ್ಣನು ಅರ್ಜುನನೊಂದಿಗೆ ಹೇಳುವುದಲ್ಲದೆ, ಈಗ ನಿನಗೆ ಹೇಳುತ್ತಿರುವ ಈ ಜ್ಞಾನವನ್ನೇ ಸೃಷ್ಟಿ ಆದಿಯಲ್ಲಿ ಸೂರ್ಯನಿಗೆ ನಾನು ಹೇಳಿದ್ದೇನೆಂದು ಕೃಷ್ಣನು ಒಂದು ಸಂಚಲನವಾದ ಮಾತನ್ನು ಹೇಳುವುದು ನಡೆದಿದೆ. ಆ ಸಂಚಲನವಾದ ಮಾತು ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲ ಶ್ಲೋಕದಲ್ಲಿಯೇ ಇದೆ. ಆ ಶ್ಲೋಕವನ್ನು ಕೆಳಗೆ ನೋಡಬಹುದು.

**1) ಶ್ಲೋ॥ ಇಮಂವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್।**
**ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇ ಬ್ರವೀತ್॥**

**2) ಶ್ಲೋ॥ ಏವಂ ಪರಂಪರಾಪ್ರಾಪ್ತಮ್ ಇಮಂ ರಾಜರ್ಷಯೋ ವಿದುಃ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ॥**

**3) ಶ್ಲೋ॥ ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃಪುರಾತನಃ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್॥**

**ಭಾವಾರ್ಥ:– "**ನಾಶವಿಲ್ಲದ ಈ ಯೋಗವನ್ನು (ಜ್ಞಾನವನ್ನು) ಆದಿಯಲ್ಲಿಯೇ ಸೂರ್ಯನಿಗೆ ನಾನು ಹೇಳಿದ್ದೆನು. ಸೂರ್ಯನು ಮನುವಿಗೆ ಹೇಳಿದಾಗ,

ಮನುವು ಇಕ್ಷ್ವಾಕನೆಂಬ ರಾಜನಿಗೆ ಹೇಳಿದ್ದಾನೆ. ಈ ವಿಧವಾಗಿ ಒಬ್ಬರಿಗೊಬ್ಬರು ಹೇಳಿಕೊಳ್ಳುವುದರಿಂದ ಭೂಮಿಮೇಲಿರುವ ರಾಜರು, ಋಷಿಗಳು ಎಲ್ಲರೂ ತಿಳಿದುಕೊಂಡಿದ್ದಾರೆ. ಎಲ್ಲರೂ ಜ್ಞಾನಿಗಳಾಗಿ ಬಹಳಕಾಲ ಇರುವಾಗ, ಕಾಲಕ್ರಮೇಣ ಜ್ಞಾನ ಇಲ್ಲದೆ ಹೋಗುತ್ತಾಬಂದು ಈದಿನ ಪೂರ್ತಿ ಇಲ್ಲದಹಾಗೆ ಹೋಗಿದೆ. ಈಗ ನಾನು ಹೇಳುವಂತಹ ಆ ಪುರಾತನ ಜ್ಞಾನ ಬಹಳ ರಹಸ್ಯವಾದುದು, ಎಲ್ಲರಿಗೂ ಹೇಳಬಾರದ್ದು ಈಗ ನಿನಗೆ ಹೇಳುತ್ತಿದ್ದೇನೆ." ಎಂದು ಕೃಷ್ಣನು ಹೇಳಿದಾಗ, ಅರ್ಜುನನು ತಕ್ಷಣವೇ ಒಂದು ಪ್ರಶ್ನೆಯನ್ನು ಕೇಳಿದ್ದಾನೆ. ಸೂರ್ಯನು ಸೃಷ್ಠಿ ಆದಿಯಲ್ಲಿಯೇ ಹುಟ್ಟಿದ್ದಾನೆ. ನೀನು ಹುಟ್ಟಿರುವುದು ಈ ಕಾಲದಲ್ಲಿ, ನೀನು ಆದಿಯಲ್ಲಿ ಹುಟ್ಟಿದ ಸೂರ್ಯನಿಗೆ ಜ್ಞಾನವನ್ನು ಹೇಗೆ ಹೇಳಿದ್ದೀಯಾ? ಎಂದು ಕೇಳಿದನು. ಅಲ್ಲಿ ನಡೆದ ಸಂಭಾಷಣೆಯನ್ನು ಅನುಸರಿಸಿ ಸ್ವಲ್ಪ ಸಂಚಲವಾದ ವಿಷಯ ಅರ್ಥವಾಗಿದೆ. ಆ ವಿಷಯವನ್ನು ಪಕ್ಕಕ್ಕಿಟ್ಟು ಸೃಷ್ಠಿ ಆದಿಯಲ್ಲಿ ದೇವರು ಸೂರ್ಯನಿಗೆ ಜ್ಞಾನವನ್ನು ಹೇಳಿದ್ದಾನೆಂದು ಅರ್ಥವಾಗಿದೆ. ಸೂರ್ಯನಿಗೆ ಹೇಳಿದ ನಂತರ ಆ ಜ್ಞಾನವನ್ನು ಸೂರ್ಯನ ಮೂಲಕ ಉಳಿದ ಪ್ರಪಂಚಕ್ಕೆ ತಿಳಿದಿದೆ. ಹಾಗೆಯೇ ಜಿಬ್ರಯೇಲ್ ಗ್ರಹಕ್ಕು ಸಹ ತಿಳಿದಿದೆ. ಸೂರ್ಯನು ಸ್ಥೂಲಶರೀರವಾದ ತನ್ನ ಗೋಳವನ್ನು ಬಿಟ್ಟು ಭೂಮಿಮೇಲಕ್ಕೆ ಸೂಕ್ಷ್ಮವಾಗಿ ಬಂದು ಮನುವು ಎಂಬ ಮಹರ್ಷಿಗೆ ಹೇಳಿದಂತೆ, ಜಿಬ್ರಯೇಲ್ ಸಹ ತನ್ನ ಸ್ಥೂಲ ಶರೀರವನ್ನು ಆಕಾಶದಲ್ಲಿಯೇ ಬಿಟ್ಟು, ಸೂಕ್ಷ್ಮಶರೀರದಿಂದ ಭೂಮಿಮೇಲಕ್ಕೆ ಬಂದು, ಮುಹಮ್ಮದ್ ಪ್ರವಕ್ತನಿಗೆ ತಾನು ಸೂರ್ಯನ ಮೂಲಕ ತಿಳಿದುಕೊಂಡ ಜ್ಞಾನವನ್ನು ಹೇಳುವುದಾಗಿದೆ. ಇದನ್ನನುಸರಿಸಿ ಸೂರ್ಯನು ಮನುವಿಗೆ ಹೇಳಿದ ಜ್ಞಾನವೂ, ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳಿದ ಜ್ಞಾನವೂ ಎರಡೂ ಒಂದೇಯೆಂದು ತಿಳಿಯುತ್ತಿದೆ.

ಆದರೆ ಸೂರ್ಯನಿಗೆ ಆದಿಯಲ್ಲಿ ಹೇಳಿದ ಜ್ಞಾನವನ್ನೇ ದ್ವಾಪರ ಯುಗದಲ್ಲಿ ಅರ್ಜುನನಿಗೆ ಹೇಳುವುದರಿಂದ ಅಲ್ಲಿ ಭಗವದ್ಗೀತೆಯಾಗಿ ತಿಳಿದ ಜ್ಞಾನವೂ, ಮುಹಮ್ಮದ್ ಪ್ರವಕ್ತರಿಗೆ ಹೇಳಿದ ಖುರ್‌ಆನಾಗಿ ತಿಳಿಸಲಾದ ಜ್ಞಾನವೂ

ಒಂದೇಯೆಂದು ಅರ್ಥವಾಗುತ್ತಿದೆ. ಭಗವದ್ಗೀತೆಯನ್ನು ಓದಿದ ಎಲ್ಲರಿಗೂ ಸೃಷ್ಠಿ ಆದಿಯಲ್ಲಿನ ಜ್ಞಾನವೇ ಭಗವದ್ಗೀತೆಯಲ್ಲಿ ಇದೆಯೆಂದು ತಿಳಿಯುತ್ತದೆ. ಆದರೆ ಅದೇ ಜ್ಞಾನವನ್ನೇ ಜಿಬ್ರಯೇಲ್ ತಿಳಿದುಕೊಂಡು ಮುಹಮ್ಮದ್ ಪ್ರವಕ್ತರಿಗೆ ಹೇಳಿದ್ದಾನೆಂದು, ಪ್ರಸ್ತುತ ಖುರ್‌ಆನಾಗಿ ಇರುವ ಜ್ಞಾನ ಭಗವದ್ಗೀತೆಯಲ್ಲಿನ ಜ್ಞಾನವೇ ಎಂದು ಯಾರಿಗೂ ತಿಳಿದಿಲ್ಲ. ಈಗ ನಾವು ಹೇಳಿದರೂ ಕೆಲವರು ನಂಬಲಾರದೆಹೋಗಬಹುದು. ಯಾರು ನಂಬಿದರೂ, ಯಾರು ನಂಬದೇ ಹೋದರೂ, ಭಗವದ್ಗೀತೆಯಲ್ಲಿನ ಜ್ಞಾನವನ್ನೇ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳುವುದು ನಡೆದಿದೆ. ಭಗವದ್ಗೀತೆಯಲ್ಲಿರುವ ಧರ್ಮಸೂತ್ರಗಳೇ ಖುರ್‌ಆನ್ ಗ್ರಂಥದಲ್ಲಿ ಇವೆ. ಈ ಮಾತು ಕೇಳಿದ ನಂತರ ಯಾರಾದರೂ ಖುರ್‌ಆನ್‌ನನ್ನು ಓದಿ ನೋಡಿದರೆ ಅವರಿಗೆ ಭಗವದ್ಗೀತೆಯಲ್ಲಿನ ಜ್ಞಾನಕ್ಕು, ಖುರ್‌ಆನ್‌ನಲ್ಲಿನ ಜ್ಞಾನಕ್ಕು ಎಂತಹ ಸಂಬಂಧವಿಲ್ಲದಂತೆ ಕಾಣಿಸುತ್ತದೆ. ನಾನು ಓದಿ ನೋಡಿದಾಗ ಭಗವದ್ಗೀತೆಗೂ ಖುರ್‌ಆನ್‌ಗೂ ಸ್ವಲ್ಪವೂ ಸಂಬಂಧ ಇಲ್ಲದಹಾಗೆ ತಿಳಿದುಹೋಗಿದೆ. ಎರಡರಲ್ಲಿಯೂ ಒಂದೇ ಜ್ಞಾನವಿದೆಯೆಂದು ಏಕೆ ಹೇಳುತ್ತಿದ್ದಾರೆಂದು ಆಲೋಚಿಸಿದರೆ, ಎರಡು ಗ್ರಂಥಗಳಲ್ಲಿಯೂ ಒಂದೇ ಜ್ಞಾನವಿರುವ ಮಾತು ನಿಜವೇಯೆಂದು ತಿಳಿಯುತ್ತಿದೆ. ಎರಡನ್ನು ಓದಿ ನೋಡಿದಾಗ ಒಂದಕ್ಕೊಂದು ಸ್ವಲ್ಪವೂ ಸಂಬಂಧವಿಲ್ಲದಹಾಗೆ ಕಾಣಿಸಿರುವುದು ನಿಜವೇ. ನಂತರ ಸ್ವಲ್ಪ ಯೋಚಿಸಿ ನೋಡಿದರೆ ಎರಡರಲ್ಲಿಯೂ ಒಂದೇ ಜ್ಞಾನವಿರುವುದು ವಾಸ್ತವವೇ. ಎಷ್ಟೋ ವಿಚಕ್ಷಣಾ ಜ್ಞಾನವಿರುವವರಿಗೆ ಮಾತ್ರವೇ ಎರಡರಲ್ಲಿಯೂ ಒಂದೇ ಜ್ಞಾನವಿದೆಯೆಂದು ತಿಳಿಯಬಲ್ಲದು.

ದ್ವಾಪರಯುಗದಲ್ಲಿ ಅರ್ಜುನನಿಗೆ ಹೇಳಿದ ಜ್ಞಾನ, ಜ್ಞಾನಯೋಗದಲ್ಲಿನ ಮೊದಲ ಮೂರು ಶ್ಲೋಕಗಳಲ್ಲಿ ಹೇಳಿದ ಪ್ರಕಾರ, ಆದಿಯಲ್ಲಿ ಆಕಾಶವಾಣಿ ಮೂಲಕ ಸೂರ್ಯನಿಗೆ ಹೇಳಿದ ಜ್ಞಾನವೆಂದು ತಿಳಿದುಹೋಗಿದೆ. ಅದೇ ಜ್ಞಾನವನ್ನೇ ದ್ವಾಪರಯುಗದಲ್ಲಿ ಅರ್ಜುನನಿಗೆ ಹೇಳುವುದರಿಂದ ಅದು ಭಗವದ್ಗೀತೆಯಾಗಿದೆ. ಜಿಬ್ರಯೇಲ್ ಅದೇ ಜ್ಞಾನವನ್ನೇ ತಿಳಿದುಕೊಂಡು ಹೇಳುವುದರಿಂದ ಕೊನೆಗದು ಖುರ್‌ಆನ್ ರೂಪವಾಗಿ ಹೊರಗೆ ಬಂದಿದೆ.

ಐದುಸಾವಿರ ವರ್ಷಗಳ ಪೂರ್ವದಲ್ಲಿ ಬಂದಿರುವ ಭಗವದ್ಗೀತೆ. 1400 ವರ್ಷಗಳ ಪೂರ್ವದಲ್ಲಿ ಬಂದಿರುವ ಖುರ್‌ಆನ್ ಎರಡೂ ಒಂದೇ ಧರ್ಮಗಳನ್ನು ತಿಳಿಸುತ್ತಿದ್ದರೂ, ಈದಿನ ಗ್ರಹಿಸಲಾರದ ಸ್ಥಿತಿಯಲ್ಲಿ ಮಾನವನಿದ್ದು, ಎರಡು ಗ್ರಂಥಗಳ ಆಧಾರದಿಂದ ಎರಡು ಮತಗಳನ್ನು ಅಭಿವೃದ್ಧಿಮಾಡಿಕೊಳ್ಳುತ್ತಿದ್ದಾನೆ. ದೇವರು ಹೇಳಿದ ಜ್ಞಾನದ ಪ್ರಕಾರ, ಎರಡು ಗ್ರಂಥಗಳಲ್ಲಿಯೂ ಮತ ಎಂಬಮಾತು ಸ್ವಲ್ಪವೂ ಇಲ್ಲ. ಅದರೂ ಮನುಷ್ಯ ಖುರ್‌ಆನ್‌ನಲ್ಲಿನ ಜ್ಞಾನವನ್ನು ಆಳವಾಗಿ ಯೋಚಿಸದೆ, ಮೇಲ್ನೋಟಕ್ಕೆ ಅರ್ಥವಾಗುವ ವಿಧಾನದ ಪ್ರಕಾರ ಮತವನ್ನು ತಯಾರುಮಾಡಿಕೊಂಡು, ಅದನ್ನು ಇಸ್ಲಾಮ್ ಎಂದೂ ಮುಸ್ಲಿಮ್ ಮತವೆಂದೂ ಹೇಳಿಕೊಳ್ಳುತ್ತಿದ್ದಾನೆ.

ಜಿಬ್ರಯೇಲ್ ಭೂಮಿಮೇಲೆ ತಿಳಿಸಿದ ಜ್ಞಾನ ದೊಡ್ಡದೇ ಆದರೂ, ಅದು ಭಗವದ್ಗೀತೆಯಲ್ಲಿ ದೇವರು ಹೇಳಿದ ಜ್ಞಾನವೇ ಆದರೂ, ಜಿಬ್ರಯೇಲ್ ಸೃಷ್ಟಿ ಆದಿಯಲ್ಲಿ ದೇವರು ಹೇಳಿದ ಜ್ಞಾನವನ್ನು ಹೇಳಿರುವುದಕ್ಕೆ ಆತನನ್ನು ಗುರು ಎನ್ನಬೇಕಾ, ಅಥವಾ ಬೋಧಕನು ಎಂದು ಕರೆಯಬೇಕಾ? ಎಂಬ ಪ್ರಶ್ನೆ ಬರುತ್ತಿದೆ. ಅದಕ್ಕೆ ಉತ್ತರವನ್ನು ನೋಡಿದರೆ ಈ ವಿಧವಾಗಿ ಹೇಳಿಕೊಳ್ಳಬಹುದು. ಗುರುವು ಗುರುತಿಸಲ್ಪಡದವನು, ಯಾರೂ ಆತನನ್ನು ಗುರುತಿಸಲಾರರು. ಆದ್ದರಿಂದ ಜಿಬ್ರಯೇಲ್‌ನನ್ನು ತಕ್ಷಣವೇ ಗುರು ಎಂದು ಹೇಳಲಾರೆವು. **ದೇವರಲ್ಲಿನ ಅನೇಕ ಅಂಶಗಳಲ್ಲಿ ಒಂದು ಅಂಶ ಸಾಕ್ಷ್ಯಾತ್ತು ಭೂಮಿಮೇಲೆ ಅವತರಿಸಿದರೂ ಆತನನ್ನು ಗುರುವು ಎನ್ನಬಹುದು.** ಗುರು ಆದವನು ಸ್ವತಃವಾಗಿ ಜ್ಞಾನವನ್ನು ಹೇಳುತ್ತಾನಾಗಲಿ, ಎಲ್ಲಿಯೋ ಕೇಳಿರುವುದನ್ನಾಗಲಿ, ಓದಿರುವುದನ್ನಾಗಲಿ ಬೋಧನೆಯಾಗಿ ಹೇಳುವುದಿಲ್ಲ. ಹಾಗೆ ಹೇಳುವವನು ಬೋಧಕನಾಗುತ್ತಾನಾಗಲಿ ಗುರುವಲ್ಲ. ಜಿಬ್ರಯೇಲ್ ಆಕಾಶವಾಣಿ ಹೇಳಿರುವು ದನ್ನು ಸ್ವತಃವಾಗಿ ಕೇಳಿಯಾದರೂ, ಅಥವಾ ಸೂರ್ಯನು ಹೇಳಿದಾಗ ಕೇಳಿಯಾದರೂ, ಅದನ್ನೇ ಹೇಳುವುದರಿಂದ ಜಿಬ್ರಯೇಲ್ ಬೋಧಕನಾ ಗುತ್ತಾನೆಂದು ಹೇಳಬಹುದು. ಅಷ್ಟೇಯಾಗಲಿ ಗುರುವಾಗಿ ಲೆಕ್ಕಿಸಬಾರದು.

ಗುರು ಎಂದರೆ ಯಾರು? ಎಂಬ ವಿಷಯ ತಿಳಿಯಬೇಕೆಂದರೆ ನಮ್ಮ ರಚನೆಯಲ್ಲಿನ **"ಗುರು"** ಎಂಬ ಗ್ರಂಥವನ್ನು ಓದಿದರೆ ಭೂಮಿಮೇಲೆ ಗುರುವು ಯಾರಾಗುತ್ತಾರೋ ಚೆನ್ನಾಗಿ ಅರ್ಥವಾಗುತ್ತದೆ. ಎಲ್ಲಾ ವಿಧಗಳು ಆಲೋಚಿಸಿದರೆ ಜಿಬ್ರಯೇಲ್ ತನಗೆ ತಿಳಿದ ಜ್ಞಾನವನ್ನೇ ಮುಹಮ್ಮದ್ ಪ್ರವಕ್ತರಿಗೆ ಹೇಳುವುದರಿಂದ ಬೋಧಕನೇ ಆಗುತ್ತಾನೆ. ಜಿಬ್ರಯೇಲ್ ಬೋಧಕನೆಂದು ತಿಳಿದುಹೋಗಿದೆ. ಆತನು ಹೇಳಿದ ಜ್ಞಾನವೇ ಖುರ್‌ಆನ್ ಗ್ರಂಥದಲ್ಲಿ ಇರುವುದರಿಂದ, ಜಿಬ್ರಯೇಲ್ ತಿಳಿಸಿದ ಜ್ಞಾನವೇ ಖುರ್‌ಆನ್ ರೂಪದಲ್ಲಿ ಇರುವುದರಿಂದ, ಖುರ್‌ಆನ್ ಜ್ಞಾನ ಸೃಷ್ಠಿ ಆದಿಯಲ್ಲಿ ದೇವರು ಹೇಳಿದ ಜ್ಞಾನವಾಗಿರುವುದರಿಂದ ಜಿಬ್ರಯೇಲ್‌ಗೆ ಏನು ಲಾಭವಿಲ್ಲ. ಅಷ್ಟುದೊಡ್ಡ ಜ್ಞಾನವನ್ನು ಹೇಳಿದರೂ ಆತನನ್ನು ಬೋಧಕನಾಗಿಯೇ ಹೇಳುತ್ತಿದ್ದೇವಾಗಲಿ, ಗುರು ಎನ್ನುವುದಕ್ಕೆ ಸಾಧ್ಯವಿಲ್ಲ. ನಾವು ಈ ಗ್ರಂಥವೊಂದರ ಹೆಸರಿನಲ್ಲಿ **"ಮೂರು ಗ್ರಂಥಗಳು, ಇಬ್ಬರು ಗುರುಗಳು, ಒಬ್ಬಬೋಧಕನು"** ಎಂದು ಹೇಳಿದ್ದೇವೆ ಅಲ್ಲವೆ! ಅದರಲ್ಲಿ ಜಿಬ್ರಯೇಲ್ ಒಬ್ಬ ಬೋಧಕನಾಗಿ ತಿಳಿದುಹೋಗಿದ್ದಾನೆ. ಮೂರು ಗ್ರಂಥಗಳಲ್ಲಿ ಖುರ್‌ಆನ್ ಗ್ರಂಥ ಸಹ ನಿಜವಾದ ದೈವಗ್ರಂಥವಾಗಿ ಲೆಕ್ಕಿಸಲ್ಪಡುವುದರಿಂದ ಅದರಲ್ಲಿ ಒಂದು ಗ್ರಂಥ ಸಹಾ ನಮಗೆ ತಿಳಿದುಹೋಗಿದೆ. ಇನ್ನು ತಿಳಿಯಬೇಕಾಗಿರುವುದು ಇಬ್ಬರು ಗುರುಗಳು, ಎರಡು ಗ್ರಂಥಗಳು.

ಸೃಷ್ಠಿ ಆದಿಯಲ್ಲಿ ಆಕಾಶವಾಣಿ ಮೂಲಕ ಸೂರ್ಯನಿಗೆ ಜ್ಞಾನ ತಿಳಿದಿದೆಯೆಂದು ಹೇಳಿಕೊಂಡಿದ್ದೇವೆ. ನಾವು ಹೇಳಿಕೊಂಡಿರುವುದಲ್ಲದೇ, ದೇವರೇ ನಾನು ಆದಿಯಲ್ಲಿ ಸೂರ್ಯನಿಗೆ ಜ್ಞಾನವನ್ನು ಹೇಳಿದ್ದೇನೆಂದು, ಆತನ ಮೂಲಕ ಸಮಸ್ತ ಪ್ರಪಂಚಕ್ಕು ಜ್ಞಾನ ತಿಳಿದಿದೆಯೆಂದು, ಈಗ ಆ ಜ್ಞಾನ ಇಲ್ಲದಹಾಗೆ ಹೋಗಿದೆಂದು, ಆದಕಾರಣ ಪ್ರಸ್ತುತ ಸೂರ್ಯನಿಗೆ ಗತದಲ್ಲಿ ನಾನು ಹೇಳಿದ ಜ್ಞಾನವನ್ನೇ ಹೇಳುತ್ತಿದ್ದೇನೆ ಕೇಳು! ಎಂದು ಅರ್ಜುನನೊಂದಿಗೆ ಹೇಳಿದ್ದಾನೆ. ನಂತರ ಅರ್ಜುನನು ಕೇಳಿದ ಜ್ಞಾನವೇ ಭಗವದ್ಗೀತೆಯಾಗಿ ರೂಪಿಸಿಗೊಂಡಿದೆ. ಆದ್ದರಿಂದ ಭಗವದ್ಗೀತೆಯನ್ನು ದೈವಗ್ರಂಥ ಎನ್ನಬಹುದು.

ಮೂರು ದೈವ ಗ್ರಂಥಗಳಲ್ಲಿ ಒಂದು ಭಗವದ್ಗೀತೆಯೆಂದು ಸಹ ತಿಳಿದಿದೆ. ಜಿಬ್ರಯೇಲ್ ಹೇಳಿದ ಜ್ಞಾನ ಖುರ್‌ಆನ್ ಗ್ರಂಥವಾಗಿ ತಯಾರಾಗಿರುವುದರಿಂದ, ಖುರ್‌ಆನ್ ಗ್ರಂಥದಲ್ಲಿನ ಜ್ಞಾನವು ಸಹ ಕೃಷ್ಣನು ಅರ್ಜುನನಿಗೆ ತಿಳಿಸಿದ ಜ್ಞಾನವೇ ಆಗಿರುವುದರಿಂದ ಇಲ್ಲಿ ಭಗವದ್ಗೀತೆಯನ್ನು, ಅಲ್ಲಿ ಖುರ್‌ಆನ್ ಗ್ರಂಥವನ್ನು ದೈವಗ್ರಂಥಗಳಾಗಿ ಹೇಳಿಕೊಳ್ಳಬಹುದು. ಈಗ ಮೂರು ಗ್ರಂಥಗಳು ಎಂಬ ಮಾತಿನಲ್ಲಿ ಎರಡು ಗ್ರಂಥಗಳು ತಿಳಿದುಹೋಗಿವೆ. ಮೂರನೇ ಗ್ರಂಥ ತಿಳಿಯಬೇಕಾಗಿದೆ. ಹಾಗೆಯೇ ಒಬ್ಬ ಬೋಧಕನು ತಿಳಿದುಹೋಗಿದ್ದಾನೆ. ಇನ್ನು ಇಬ್ಬರು ಗುರುಗಳು ತಿಳಿಯಬೇಕಾಗಿದೆ.

ಭಗವದ್ಗೀತೆ ದ್ವಾಪರಯುಗ ಅಂತ್ಯದಲ್ಲಿ ಹುಟ್ಟಿದೆ. ಇಲ್ಲಿಗೆ ಸುಮಾರು 5000 ವರ್ಷಗಳ ಪೂರ್ವದಲ್ಲಿ ಖಚಿತವಾಗಿ ಹೇಳಿದರೆ ಭಗವದ್ಗೀತೆ ಹುಟ್ಟಿ ಇಲ್ಲಿಗೆ ಅಂದರೆ 2014 ವರ್ಷಗಳಿಗೆ 5152 ವರ್ಷಗಳು ಆಗಿವೆ. ಭಾರತ ಯುದ್ಧ ನಡೆದಿರುವುದು ಕ್ರಿಸ್ತ ಪೂರ್ವ (3138) ವರ್ಷಗಲಾಗ. ಕೃಷ್ಣನು ಭಗವದ್ಗೀತೆಯನ್ನು ಹೇಳಿರುವುದು ಸಹ ಆಗಲೇ. ಆಗ ಕೃಷ್ಣನ ವಯಸ್ಸು (90) ವರ್ಷಗಳು. ಕೃಷ್ಣನು ಗೀತೆಯನ್ನು ಹೇಳಿದ ನಂತರ (36) ವರ್ಷಗಳು ಜೀವಿಸಿದನು. ಕೃಷ್ಣನು ಮರಣಿಸಿರುವುದು ಕ್ರಿಸ್ತ ಪೂರ್ವ 2-2-3102. ಕೃಷ್ಣನ ಜೀವನಕಾಲ (126) ವರ್ಷಗಳು. ಈ ವರ್ಷಕ್ಕೆ (2014) ಭಗವದ್ಗೀತೆ ಹುಟ್ಟಿ 5152 ವರ್ಷಗಳಾಗುತ್ತದೆ. ಅಂದರೆ ಭಗವದ್ಗೀತೆ ವಯಸ್ಸು (5152) ವರ್ಷಗಳೆಂಬ ಮಾತು. ಖುರ್‌ಆನ್ ಹುಟ್ಟಿರುವುದು ಕ್ರಿ.ಶ. 633 ವರ್ಷಗಳು ಇಲ್ಲಿಗೆ ಖುರ್‌ಆನ್ ವಯಸ್ಸು 1381 ವರ್ಷಗಳು. ಭಗವದ್ಗೀತೆಗಿಂತ ಖುರಾನ್ ಗ್ರಂಥ 3771 ವರ್ಷಗಳು ಚಿಕ್ಕದು. ಕ್ರಿ.ಶ॥ 633 ವರ್ಷಗಳ ಸಮಯದಲ್ಲಿ ತಯಾರಾದ ಖುರ್‌ಆನ್ ಗ್ರಂಥ ಕೊನೆಯ ಗ್ರಂಥವೆಂದು ಖುರ್‌ಆನ್‌ನಲ್ಲಿಯೇ ಹೇಳಲಾಗಿದೆ. ಮುಹಮ್ಮದ್ ಪ್ರವಕ್ತ ಕೊನೆಯ ಪ್ರವಕ್ತನೆಂದು ಹೇಳುವುದರಿಂದ ಖುರ್‌ಆನ್ ಗ್ರಂಥ ಕೊನೆಯ ದೈವಗ್ರಂಥವೆಂದು ಅರ್ಥವಾಗುತ್ತಿದೆ. ಅದರಪ್ರಕಾರ ಭಗವದ್ಗೀತೆ ಮೊದಲೇ ಹುಟ್ಟಿದ ಮೊದಲ ಗ್ರಂಥವಾಗಿರುವುದರಿಂದ ಭಗವದ್ಗೀತೆಯನ್ನು

ಪ್ರಥಮ ದೈವಗ್ರಂಥವಾಗಿ ಲೆಕ್ಕಿಸಿ ಹೇಳಬಹುದು. ಭಗವದ್ಗೀತೆ ಪ್ರಥಮ ದೈವಗ್ರಂಥವಾಗಿ, ಹಾಗೆಯೇ ಖುರ್‌ಆನ್ ಗ್ರಂಥ ಕೊನೆಯ ದೈವಗ್ರಂಥವಾಗಿ ತಿಳಿದುಹೋಗಿದೆ. ಇನ್ನು ಮಧ್ಯ ದೈವ ಗ್ರಂಥ ತಿಳಿಯಬೇಕಾಗಿದೆ. ಅದೇ ವಿಧವಾಗಿ ಇಬ್ಬರು ಗುರುಗಳು ಯಾರೋ ತಿಳಿಯಬೇಕಾಗಿದೆ.

ಖುರ್‌ಆನ್ ಗ್ರಂಥವನ್ನು ಚರಿತ್ರೆ ಪ್ರಕಾರ 10–08–610 ವರ್ಷ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಹೇಳುವುದನ್ನು ಪ್ರಾರಂಭಿಸಿದ್ದಾನೆ. ಆಗಿನಿಂದ 23 ವರ್ಷಗಳು ಖುರ್‌ಆನ್ ಗ್ರಂಥವೊಂದರ ಬೋಧನೆ ಮುಂದುವರೆಯಿತು. ಖುರ್‌ಆನ್ ಗ್ರಂಥ ಪ್ರಾರಂಭವಾದಾಗ ಮುಹಮ್ಮದ್ ಪ್ರವಕ್ತರ ವಯಸ್ಸು 40 ವರ್ಷಗಳು. ಆತನು 63 ವರ್ಷಗಳ ವಯಸ್ಸಿನಲ್ಲಿ ಮರಣಿಸಿದನು. ಅದರ ಪ್ರಕಾರ 23 ವರ್ಷಗಳು ಖುರ್‌ಆನ್ ಬೋಧನೆ ನಡೆದಿದೆ. ಪ್ರವಕ್ತರ ಕೊನೆಯ ದಿನಗಳಲ್ಲಿ ಖುರ್‌ಆನ್‌ನನ್ನು ತಯಾರಿ ಮಾಡುವುದು ನಡೆದಿದೆ. ಮುಹಮ್ಮದ್ ಪ್ರವಕ್ತರು ಖುರ್‌ಆನ್ ಗ್ರಂಥಕ್ಕೆ ಅಥವಾ ಖುರ್‌ಆನ್ ಜ್ಞಾನಕ್ಕೆ ಪ್ರವಕ್ತನಾಗಿದ್ದಾನೆಂದು ತಿಳಿಯುತ್ತಿದೆ. ಜ್ಞಾನವನ್ನು ಹೇಳಿದವನನ್ನು ಪ್ರವಕ್ತಯೆಂದು ಹೇಳಬಹುದು. ಬೋಧಕನು ಎಂದು ಹೇಳಬಹುದಾಗಲಿ, ಗುರು ಎಂದು ಹೇಳಬಾರದು. ಗುರು ಎನ್ನುವುದಕ್ಕೆ ಪ್ರತ್ಯೇಕತೆ ಇರಬೇಕು. ಒಂದೊಂದು ಮತಕ್ಕೆ ಪ್ರವಕ್ತನಾಗಲಿ, ಬೋಧಕನಾಗಲಿ ಇರಬಹುದು. ಆದರೆ ಒಂದು ಮತಕ್ಕೆ ಗುರು ಎಂದಿಗೂ ಇರುವುದಿಲ್ಲ. ಒಂದು ಮತಕ್ಕೆ ಸಂಬಂಧಿಸಿದವನು ಗುರು ಅಲ್ಲ. ಗುರು ಎಲ್ಲ ಮತಗಳಿಗೂ ಸಂಬಂಧಿಸಿ ದವನಾಗಿರುತ್ತಾನೆ. ಒಂದು ಮತಕ್ಕೆ ಜವಾಬ್ದಾರರಾಗಿ ಅಥವಾ ಮತ ಹಿರಿಯನಾಗಿ, ಒಬ್ಬರು ಇದ್ದು ಅವರ ಹೆಸರಿನ ಮೇಲೆ ಮತ ಆಧಾರಪಟ್ಟಿರುತ್ತದೆ. ಆ ಮತದಲ್ಲಿನವರೆಲ್ಲರೂ ಮತ ಹಿರಿಯ ಅಥವಾ ಮತ ಜವಾಬ್ದಾರಿಯುತ ಅಥವಾ ಮತಪ್ರವಕ್ತ, ಅಥವಾ ಮತಬೋಧಕನು ಯಾರಾಗಿರುತ್ತಾನೋ ಆತನ ಹೆಸರೇ ಹೇಳಿಕೊಳ್ಳುತ್ತಿರುತ್ತಾರೆ. ಉದಾಹರಣೆಗೆ ಇಸ್ಲಾಮ್ ಮತವನ್ನು ತೆಗೆದುಕೊಂಡು ಆ ಮತಸ್ಥರನ್ನು ನಿಮ್ಮ ಮತಪ್ರವಕ್ತ ಯಾರು? ಎಂದರೆ ಸ್ವಲ್ಪವೂ ಆಲಸ್ಯ

ಮಾಡದೆ ಮುಹಮ್ಮದ್ ಪ್ರವಕ್ತಯೆಂದು ಹೇಳುತ್ತಾರೆ. ಮುಹಮ್ಮದ್ ಪ್ರವಕ್ತ ಮರಣಿಸಿದರೂ ಮೊದಲು ಆತನ ಹೆಸರೇ ಇರುವುದರಿಂದ ಈಗಲೂ ಆತನ ಹೆಸರೇ ಹೇಳುತ್ತಿದ್ದಾರೆ. ನಂತರ ಕಾಲದಲ್ಲಿಯೂ ಸಹ ಆತನ ಹೆಸರೇ ಹೇಳುತ್ತಾರೆ. ಬೌದ್ಧಮತವನ್ನು ಕುರಿತು ಆ ಮತಸ್ಥರನ್ನು ಅವರ ಪ್ರವಕ್ತ ಇಲ್ಲವೆ ಅವರ ಬೋಧಕನು ಯಾರು? ಎಂದು ಕೇಳಿದರೆ ಅವರು ಸಹ ಆ ಮತವನ್ನು ಸ್ಥಾಪಿಸಿದ ಗೌತಮಬುದ್ಧನ ಹೆಸರು ಹೇಳುತ್ತಾರೆ. ಹಾಗೆಯೇ ಕ್ರೈಸ್ತರನ್ನು ನಿಮ್ಮ ಮತ ಹಿರಿಯ ಯಾರು ಎಂದಾಗಲಿ, ನಿಮ್ಮ ಮತಪ್ರವಕ್ತ ಯಾರು ಎಂದಾಗಲಿ ಕೇಳಿದರೆ ಆಲೋಚಿಸದೆ ಯೇಸುಪ್ರಭು ಎಂದು ಹೇಳುತ್ತಾರೆ. ಅದೇ ವಿಧವಾಗಿ ಒಂದು ಮತ ಇದೆಯೆಂದರೆ ಅದಕ್ಕೆ ಒಬ್ಬ ಜವಾಬ್ದಾರನು ಇಲ್ಲವೆ ಪ್ರವಕ್ತ ಇರುವುದು ಸಹಜವೇ. ಆದರೆ ಹಿಂದೂಮತಕ್ಕೆ ಯಾರು ಪ್ರವಕ್ತ ಎಂದರೆ ಈತನೇಯೆಂದು ಯಾರೂ ಧೈರ್ಯವಾಗಿ ಹೇಳಲಾರದೆ ಹೋಗುತ್ತಿದ್ದಾರೆ. ಅದಕ್ಕೆ ಕಾರಣ ಹಿಂದೂ ಮತ ಯಾವಾಗ ಹುಟ್ಟಿದೆಯೋ, ಯಾರು ಆ ಹೆಸರು ಇಟ್ಟಿದ್ದಾರೋ ಯಾರಿಗೂ ತಿಳಿದಿಲ್ಲ. ಆದ್ದರಿಂದ ಹಿಂದೂಮತಕ್ಕೆ ಪ್ರವಕ್ತ ಇದ್ದಾನೋ! ಇಲ್ಲವೋ! ಸಹಾ ತಿಳಿದಿಲ್ಲ.

ಒಂದು ಹಿಂದೂ ಮತ ಹೊರತು ಉಳಿದ ಮತಗಳಿಗೆಲ್ಲಾ ಪ್ರವಕ್ತರಿದ್ದಾರೆ. ಆ ಮತಗಳು ಹುಟ್ಟಿದ ವರ್ಷಗಳು ಸಹಾ ಇವೆ. ಈದಿನ ಹಿಂದೂಮತ ಎಂಬುದು ಸೃಷ್ಠಿ ಆದಿಯಲ್ಲಿಯೇ **"ಇಂದು"** ಎಂಬ ಹೆಸರಿನಿಂದ ಹುಟ್ಟಿದೆ. ಆ ದಿನ ಇಂದೂ ಎನ್ನುವುದು ಒಂದು ಮತವಾಗಿ ಇರುತ್ತಿರಲಿಲ್ಲ. ಆ ದಿನ ದೇಶದಲ್ಲಿನ ಪ್ರಜೆಗಳೆಲ್ಲರನ್ನು ಇಂದೂಗಳು ಎನ್ನುತ್ತಿದ್ದರು. ಇಂದೂಗಳು ಎಂದರೆ ಜ್ಞಾನಿಗಳು ಎಂದು ಅರ್ಥ ಇದೆ. ಕೃತಯುಗದಲ್ಲಿಯೇ ಪ್ರಪಂಚ ವ್ಯಾಪ್ತವಾಗಿ ಎಲ್ಲಾ ದೇಶಗಳಲ್ಲಿಯೂ ಇಂದೂಗಳು ಇರುತ್ತಿದ್ದರು. ಮೊದಲು ಪ್ರಪಂಚ ವ್ಯಾಪ್ತವಾಗಿ ಇಂದೂಗಳಿರುತ್ತಿದ್ದರು ಎನ್ನುವುದಕ್ಕೆ ಆಧಾರ ಸಹ ಇದೆ. ಹಾಗಿರುವ ಕೃತಯುಗದಿಂದ ಕಾಲಕ್ರಮೇಣ ಪ್ರಪಂಚ ವ್ಯಾಪ್ತವಾಗಿರುವ ಇಂದೂಗಳು ಇಲ್ಲದೆ ಹೋಗಿ, ಅಜ್ಞಾನಿಗಳು ತಯಾರಾಗಿ ಕೊನೆಗೆ ಇಂದುತ್ವ ಇಲ್ಲದ ಮತಗಳನ್ನು

ಸ್ಥಾಪಿಸಿಕೊಳ್ಳುವುದು ನಡೆದಿದೆ. ಕೆಲವು ದೇಶಗಳಲ್ಲಿ ಯಾವ ಮತವೂ ಇಲ್ಲದಂತೆ ಇತ್ತು. ಇಂದೂತ್ವ ಮೊದಲು ಹುಟ್ಟಿರುವುದು ಭಾರತದೇಶದಲ್ಲಿಯೇ, ಆದ್ದರಿಂದ ಉಳಿದ ಎಲ್ಲಾ ದೇಶಗಳಲ್ಲಿ ಇಂದೂತ್ವ ಇಲ್ಲದೆ ಹೋದರೂ, ಭಾರತದೇಶ ಕೇಂದ್ರವಾಗಿ ಇಂದೂತ್ವ ಇನ್ನೂ ನಿಂತಿದೆ. ಆದರೆ ಈ ದಿನ ಇಂದೂತ್ವವು ಇಲ್ಲದೆ ಇಂದೂ ಸಮಾಜ ಸ್ವಲ್ಪ ಹೆಸರು ಬದಲಾಯಿಸಿಕೊಂಡು ಹಿಂದೂಮತವಾಗಿ ತಯಾರಾಗಿದೆ. ಈದಿನ ಇಂದೂತ್ವ ಹಿಂದೂಮತವಾಗಿ ಹೆಸರು ಬದಲಾಯಿಸಿಕೊಂಡರೂ, ಚರಿತ್ರೆ ತಿಳಿದ ನಮ್ಮಂತವರು, ನಾವು ಮತ್ತಿತರರು, ಹಿಂದೂ ಪದವನ್ನು ಒಪ್ಪಿಕೊಳ್ಳದಿದ್ದರೂ, ನಾವು ಹಿಂದೂಗಳು ಅಲ್ಲ, ಇಂದೂಗಳೆಂದು ಹೇಳಿದರೂ, ಚರಿತ್ರೆ ಹೀನರು ನಮ್ಮ ಮಾತನ್ನು ಲೆಕ್ಕಮಾಡದಂತೆ ತಮ್ಮನ್ನು ಹಿಂದೂಗಳಾಗಿಯೇ ಹೇಳಿಕೊಳ್ಳುತ್ತಿದ್ದಾರೆ. ಹಿಂದಿನಯುಗಗಳಲ್ಲಿ ಇಲ್ಲದ ಅಜ್ಞಾನ ಕಲಿಯುಗದಲ್ಲಿ ಇರುವುದರಿಂದ, ಪೂರ್ವವಿರುವ ಇಂದೂ ಸಮಾಜ ಇಲ್ಲದೆ ಹೋಗಿ, ಹಿಂದೂಮತ ತಯಾರಿಯಾಗಿ ಅದರಿಂದಲೂ ಸಹ ಸುಮಾರು ಹನ್ನೊಂದು ಮತಗಳು ಹೊಸದಾಗಿ ತಯಾರಿಯಾಗಿವೆ. ಇಂದೂಸಮಾಜದ ನಂತರ ಇಂದೂಗಳು ಹಿಂದೂಗಳಾಗಿ ತಯಾರಾಗಿ, ನಂತರ 1) ಕ್ರೈಸ್ತ ಮತ 2) ಇಸ್ಲಾಮ್ ಮತ 3) ಬೌದ್ಧಮತ 4) ಸಿಕ್ಕು ಮತ 5) ಜೈನ ಮತ 6) ಷಿಂಟೋ ಮತ 7) ಜೋರಾಸ್ಟ್ರಿಯನ್ ಮತ 8) ಬಾಹಾಯಿಮತ 9) ಜುಡಾಯಿಜಮ್ ಮತ (ಯೂದರಮತ) 10) ಟಾವೋ ಮತ 11) ಕನ್‌ಫ್ಯೂಷಿಯಸ್ ಎಂಬ ಮತಗಳು ತಯಾರಿಯಾಗಿವೆ.

ಹಿಂದೂಮತದ ನಂತರ ತಯಾರಾದ ಹನ್ನೊಂದು (11) ಮತಗಳನ್ನು ಸೇರಿಸಿದರೆ ಒಟ್ಟು ಪ್ರಪಂಚವ್ಯಾಪ್ತವಾಗಿ ಹನ್ನೆರಡು (12) ಮತಗಳು ಇವೆ. ಹನ್ನೊಂದು ಮತಗಳಲ್ಲಿ ಮುಖ್ಯವಾದವು ಮೂರು ಮತಗಳೇ ಇವೆ. ಅವುಗಳೇ 1) ಹಿಂದೂ (ಇಂದೂ), 2) ಇಸ್ಲಾಮ್, 3) ಕ್ರೈಸ್ತ. ಈ ಮೂರು ಆಧ್ಯಾತ್ಮಿಕದ ಪ್ರಕಾರ ಮುಖ್ಯವಾದ ಮತಗಳೆಂದು ಹೇಳಬಹುದು. ಏಕೆಂದರೆ ಮೂರು

ಮತಗಳು ಒಬ್ಬನೇ ಸೃಷ್ಟಿಕರ್ತನನ್ನು ಕುರಿತು ಹೇಳುತ್ತಿವೆ. ಮತಗಳ ಹೆಸರುಗಳು, ಪ್ರವಕ್ತರು ಯಾರಾದರೂ ಅವುಗಳಲ್ಲಿರುವ ಮೂಲಜ್ಞಾನವು ಒಂದೇ. ಆದಕಾರಣ ಮೂರು ಮತಗಳನ್ನು ಮುಖ್ಯವಾದವುಗಳಾಗಿ ಹೇಳಬಹುದು. ಉಳಿದ ಮತಗಳು ಒಂದೊಂದು ಒಂದೊಂದು ದಾರಿಯಲ್ಲಿ ಪ್ರಯಾಣಿಸುತ್ತಿವೆ. ಆದ್ದರಿಂದ ಅವುಗಳನ್ನು ಕುರಿತು ಹೇಳಲಿಲ್ಲ. ಉಳಿದ ಮತಗಳಲ್ಲಿನ ಸಾರಾಂಶಕ್ಕಿಂತಲೂ, ಜ್ಞಾನಕ್ಕಿಂತಲೂ ಇಂದೂ, ಇಸ್ಲಾಮ್, ಕ್ರೈಸ್ತ ಎಂಬ ಮೂರರಲ್ಲಿಯೂ ಹೆಚ್ಚಿನ ಜ್ಞಾನ, ಜ್ಞಾನಶಕ್ತಿ ಇದೆ. ಆದ್ದರಿಂದ ಅವುಗಳನ್ನು ಕುರಿತೇ ಹೆಚ್ಚಾಗಿ ಹೇಳುತ್ತಿದ್ದೇವೆ. ಒಟ್ಟಾರೆ ಪ್ರಪಂಚವ್ಯಾಪ್ತವಾಗಿ ಹನ್ನೆರಡು ಮತಗಳಿರುವಾಗ ಅವುಗಳಲ್ಲಿ 1) ಇಂದೂಯಿಜಮ್ 2) ಜೈನಿಜಮ್, 3) ಸಿಕ್ಕಿಜಮ್, 4) ಬುದ್ಧಿಜಮ್ ಎಂಬ ನಾಲ್ಕು ಭಾರತದೇಶದಲ್ಲಿಯೇ ಹುಟ್ಟಿರುವವೇ. ಉಳಿದ ಎಂಟರಲ್ಲಿ ಎರಡು ಚೈನಾದಲ್ಲಿ ಹುಟ್ಟಿವೆ. ಅವುಗಳಲ್ಲಿ ಒಂದು ಟಾವೋಯಿಜಮ್, ಎರಡು ಕನ್‌ಫ್ಯೂಷಿಯನಿಜಮ್. ಇವಲ್ಲದೆ ಉಳಿದ ಆರರಲ್ಲಿ ಕ್ರೈಸ್ತ ಮತ್ತು ಜುಡಾಯಿಜಮ್ (ಯೂದುಮತ) ಇಸ್ರಾಈಲ್ ದೇಶದಲ್ಲಿ ಹುಟ್ಟಿದರೆ, ಇಸ್ಲಾಮ್ ಮತ ಅರಬ್‌ದೇಶವಾದ ಮಕ್ಕಾದಲ್ಲಿ ಹುಟ್ಟಿದೆ. ಉಳಿದ ಮೂರರಲ್ಲಿ ಷಿಂಟೋ ಮತ ಜಪಾನ್‌ನಲ್ಲಿ ಹುಟ್ಟಿದೆ. ಜೊರಾಸ್ಟ್ರಿಯನ್ ಮತ ಮತ್ತು ಬಹಾಯಿಜಮ್ ಎರಡು ಮತಗಳು ಇರಾನ್ (ಪರ್ಷಿಯಾ) ದೇಶದಲ್ಲಿ ಹುಟ್ಟಿವೆ. ಪ್ರಪಂಚದಲ್ಲಿನ ಹನ್ನೆರಡು ಮತಗಳಲ್ಲಿ ನಾಲ್ಕು ಭಾರತದೇಶದಲ್ಲಿಯೇ ಹುಟ್ಟಿವೆ. ಎರಡು ಚೈನಾದೇಶದಲ್ಲಿ ಹುಟ್ಟಿವೆ. ಎರಡು ಇಸ್ರಾಈಲ್‌ನಲ್ಲಿ ಹುಟ್ಟಿವೆ. ಎರಡು ಇರಾನ್‌ನಲ್ಲಿ ಹುಟ್ಟಿವೆ. ಉಳಿದ ಎರಡರಲ್ಲಿ ಒಂದು ಜಪಾನ್‌ನಲ್ಲಿ, ಮತ್ತೊಂದು ಅರಬ್ ದೇಶದಲ್ಲಿ ಹುಟ್ಟಿವೆ. ಇವೆಲ್ಲವೂ ಯಾವುದೋ ಒಂದು ವಿಧವಾಗಿ ದೇವರಿದ್ದಾನೆಂದು ಹೇಳುವ ಮತಗಳಾಗಿದ್ದು, ದೇವರು ಇಲ್ಲವೆಂದು ಹೇಳುವ ಮತವು ಸಹ ಇದೆ. ಅದನ್ನೇ ನಾಸ್ತಿಕ ಮತ ಎನ್ನುತ್ತಾರೆ. ನಾಸ್ತಿಕ ಮತಕ್ಕು ಸಹ ಹುಟ್ಟುವಿಕೆ ಭಾರತದೇಶವೇ ಎಂದು ತಿಳಿಯಬೇಕು.

## 1) ಕ್ರೈಸ್ತ ಮತ

1) ಮತದ ಹೆಸರು – ಕ್ರೈಸ್ತ ಮತ
2) ಹುಟ್ಟಿದ ದೇಶ – ಇಜ್ರಾಯೆಲ್‌ದೇಶ
3) ಹುಟ್ಟಿದ ಸಂ॥ – 30ಸಂ॥ಕ್ರೀಸ್ತುನಂತರ
4) ಮತ ಪ್ರವಕ್ತ – ಯೇಸು
5) ಮತ ಜನಸಂಖ್ಯೆ – 210 ಕೋಟಿಗಳು
6) ಮತ ಸ್ಥಾನ – ಪ್ರಥಮ ಸ್ಥಾನ
7) ಇವರ ದೇವರು ಯೆಹೋವಾ.
8) ವಿಗ್ರಹಾರಾಧನೆ ಇಲ್ಲ.
9) ಸ್ವರ್ಗ, ನಕರಗಳ ನಂಬಿಕೆಯಿದೆ.
10) ಜನನ ಮರಣಗಳ ನಂಬಿಕೆ ಇಲ್ಲ.
11) ಚರ್ಚಿನಲ್ಲಿ ಪ್ರಾರ್ಥನೆ ಮಾಡುವುದು ಇವರ ಆರಾಧನೆ.
12) ಬಾಪ್ತಿಸ್ಮ ಇವರ ಉಪದೇಶ.


(ಮತ ಗುರುತು)

## 2) ಇಸ್ಲಾಮ್ ಮತ

1) ಮತದ ಹೆಸರು – ಇಸ್ಲಾಂ ಮತ
2) ಹುಟ್ಟಿದ ದೇಶ – ಅರಬ್ ದೇಶ
3) ಹುಟ್ಟಿದ ಸಂ॥ 622ಸಂ॥ಕ್ರೀಸ್ತುನಂತರ
4) ಮತ ಪ್ರವಕ್ತ – ಮುಹಮ್ಮದ್
5) ಮತ ಜನಸಂಖ್ಯೆ – 160 ಕೋಟಿಗಳು
6) ಮತ ಸ್ಥಾನ – ದ್ವಿತೀಯ ಸ್ಥಾನ
7) ಏಕೇಶ್ವರೋಪಾಸನ ಹೊರತು, ಏನೂ ಇಲ್ಲ.
8) ವಿಗ್ರಹಾರಾಧನೆ ಇಲ್ಲ.


(ಮತ ಗುರುತು)

9) ಸ್ವರ್ಗ, ನರಕಗಳ ನಂಬಿಕೆಯಿದೆ.
10) ಜನನ ಮರಣಗಳನ್ನು ನಂಬುವುದಿಲ್ಲ.
11) ನಮಾಜ್, ಜಕಾತ್, ಇವರ ಪ್ರಾರ್ಥನಾ ಭಾಗಗಳು.
12) ಮೋಕ್ಷದ ಬಗ್ಗೆ ತಿಳಿದಿಲ್ಲ.

## 3) ಹಿಂದೂಮತ



(ಮತ ಗುರುತು)

1) ಮತದ ಹೆಸರು – ಹಿಂದೂಮತ
2) ಹುಟ್ಟಿದ ದೇಶ – ಭಾರತ ದೇಶ
3) ಹುಟ್ಟಿದ ಸಂ॥ – ಯಾರಿಗೂ ತಿಳಿದಿಲ್ಲ.
4) ಮತ ಪ್ರವಕ್ತ – ದೇವರು ಯಾರೋ ತಿಳಿದಿಲ್ಲ.
5) ಮತ ಜನಸಂಖ್ಯೆ – 100 ಕೋಟಿಗಳು
6) ಮತ ಸ್ಥಾನ – ತೃತೀಯ ಸ್ಥಾನ
7) ದೇವರಿದ್ದಾನೆಂದು ಹೇಳುತ್ತಾರೆ.
8) ವಿಗ್ರಹಾರಾಧನೆ ಇದೆ. ದೇವತೆಗಳ ಮೇಲೆ ಭಕ್ತಿ ಇದೆ.
9) ಸ್ವರ್ಗ, ನರಕಗಳ ನಂಬಿಕೆಯಿದೆ.
10) ಕರ್ಮಸಿದ್ಧಾಂತ ಇದೆ. ಇವರ ಗಮ್ಯ ಮೋಕ್ಷ.
11) ಜನನ ಮರಣಗಳಿವೆಯೆಂದು ನಂಬುತ್ತಾರೆ.
12) ಯಜ್ಞಯಾಗಾದಿಗಳು, ತಪಸ್ಸುಗಳು, ಧ್ಯಾನಗಳು ಮಾಡುತ್ತಾರೆ.

## 4) ಬೌದ್ಧ ಮತ



(ಮತ ಗುರುತು)

1) ಮತದ ಹೆಸರು – ಬೌದ್ಧಮತ
2) ಹುಟ್ಟಿದ ದೇಶ – ಭಾರತ ದೇಶ
3) ಹುಟ್ಟಿದ ಸಂ॥ – 560ಸಂ॥ ಕ್ರೀ.ಪೂರ್ವ
4) ಮತ ಪ್ರವಕ್ತ – ಗೌತಮ ಬುದ್ಧನು

5) ಮತ ಜನಸಂಖ್ಯೆ – 36 ಕೋಟಿಗಳು

6) ಮತ ಸ್ಥಾನ – ನಾಲ್ಕನೆಯ ಸ್ಥಾನ

7) ದೇವರು ಇದ್ದಾನೆಂದು ನಂಬುವುದಿಲ್ಲ.

8) ಇವರ ಬೋಧನೆಯಲ್ಲಿ ಮನುಷ್ಯನನ್ನು ಪ್ರೇಮಿಸಿರಿ, ಆಸೆ ಮತ್ತು ಕೋಪವನ್ನು ಬಿಡಲು ಇರುತ್ತದೆ.

9) ಈ ಜನ್ಮದಲ್ಲಿ ಮಾಡಿದ ಒಳ್ಳೆಯ ಕೆಟ್ಟ ಕಾರ್ಯಗಳಿಗೆ, ಬರುವ ಜನ್ಮದಲ್ಲಿ ಅನುಭವಿಸಬೇಕಾಗಿರುತ್ತದೆ.

10) ನಿರ್ಯಾಣ (ಮೋಕ್ಷ) ಎಂಬ ಸ್ಥಿತಿಯನ್ನು ಸೇರಿಕೊಳ್ಳುವುದು ಮುಖ್ಯಗಮ್ಯ, ಆಗ ಪುನಃ ಜನ್ಮಿಸುವುದು, ಅನುಭವಿಸುವುದು ಇರುವುದಿಲ್ಲ.

## 5) ಸಿಕ್ಕು ಮತ

1) ಮತದ ಹೆಸರು – ಸಿಕ್ಕುಮತ

2) ಹುಟ್ಟಿದ ದೇಶ – ಭಾರತ ದೇಶ

3) ಹುಟ್ಟಿದ ಸಂ॥ – 1500ಸಂ॥ ಕ್ರೀ.॥ನಂತರ

4) ಮತ ಪ್ರವಕ್ತ – ಗುರುನಾನಕ್

5) ಮತ ಜನಸಂಖ್ಯೆ – 2 ಕೋಟಿ 30 ಲಕ್ಷಗಳು

6) ಮತ ಸ್ಥಾನ – ಐದನೇ ಸ್ಥಾನ



(ಮತ ಗುರುತು)

7) ಪ್ರಪಂಚಕ್ಕೆ ಒಬ್ಬನೇ ದೇವರು.

8) ದೇವರು ಯಾವಾಗಲೂ ಪ್ರಪಂಚದಲ್ಲಿ ಬೆರೆತಿದ್ದು, ಪ್ರಪಂಚವನ್ನು ನಡೆಸುತ್ತಿರುತ್ತಾನೆ.

9) ದೇವರಿಗೆ ಎಂತಹ ಆಕಾರ ಇಲ್ಲ.

10) ಕರ್ಮದಿಂದಲೆ ಜನ್ಮಗಳು ಇವೆ.

11) ದೇವರನ್ನು ಕುರಿತು ತಿಳಿದುಕೊಂಡು, ಐಕ್ಯವಾದರೆ, ಮತ್ತೆಜನ್ಮ ಇರುವುದಿಲ್ಲ

12) ಯಾವಾಗಲೂ ದೇವರ ಧ್ಯಾಸವನ್ನು ಇಟ್ಟುಕೊಳ್ಳುವುದು, ಸಮಾಜದಲ್ಲಿ ಒಳ್ಳೆಯ ಕೆಲಸಗಳು ಮಾಡುತ್ತಾ, ಪ್ರಜೆಗಳಿಗೆ ಒಳ್ಳೆಯದು ಮಾಡುವುದು ಮುಖ್ಯ ಕರ್ತವ್ಯ.

## 6) ಟಾವೋ ಮತ


(ಮತ ಗುರುತು)

1) ಮತದ ಹೆಸರು – ಟಾವೊಮತ
2) ಹುಟ್ಟಿದ ದೇಶ – ಚೈನಾ
3) ಹುಟ್ಟಿದ ಸಂ॥ – 550ಸಂ॥ ಕ್ರೀ. ಪೂರ್ವ
4) ಮತ ಪ್ರವಕ್ತ – ಲಾವೊಟ್ಜು
5) ಮತ ಜನಸಂಖ್ಯೆ – 2 ಕೋಟಿ
6) ಮತ ಸ್ಥಾನ – ಆರನೇ ಸ್ಥಾನ
7) ಟಾವೋ ಎಂದರೆ ದಾರಿ.
8) ಉನ್ನತ ಶಕ್ತಿ ಎನ್ನುವುದು ಒಂದು ಇದೆ, ಅದನ್ನು ವರ್ಣಿಸಲಾರೆವು.
9) ಆ ಶಕ್ತಿಯನ್ನೇ ಟಾವೋ ಎನ್ನುತ್ತೇವೆ.
10) ಪ್ರಪಂಚವೆಲ್ಲಾ 'ಯಿನ್' (ಕೆಟ್ಟದು) ಮತ್ತು 'ಯಾಂಗ್'(ಒಳ್ಳೆಯ) ಶಕ್ತಿಯಿಂದ ಸಮತೂಕವಾಗಿದೆ.

## 7) ಜುಡಾಯಿಜಮ್ (ಯೂದು ಮತ)


(ಮತ ಗುರುತು)

1) ಮತದ ಹೆಸರು – ಜುಡಾಯಿಜಮ್
2) ಹುಟ್ಟಿದ ದೇಶ – ಇಜ್ರಾಯೇಲ್
3) ಹುಟ್ಟಿದ ಸಂ॥ – 1300ಸಂ॥ಕ್ರೀ.ಪೂರ್ವ
4) ಮತ ಪ್ರವಕ್ತ – 1) ಅಬ್ರಹಮ್
2) ಇಸ್ಸಾಕ್
3) ಜಾಕೋಬ್

5) ಮತ ಜನಸಂಖ್ಯೆ – 1ಕೋಟಿ40ಲಕ್ಷಗಳು

6) ಮತ ಸ್ಥಾನ – ಏಳನೇ ಸ್ಥಾನ

7) ಒಬ್ಬನೇ ದೇವರು ಇದ್ದಾನೆ, ಹೇಗೆ ಇದ್ದಾನೋ ವರ್ಣಿಸಲಾರೆವು.

8) ಮೋಸೆಸ್‌ಮುಖ್ಯಪ್ರವಕ್ತ, ಮೋಸೆಸ್ ಬರೆದಿರುವುದು ತೊರಾಹ್ ದೈವಗ್ರಂಥ.

9) ದೇವರು ಎಲ್ಲರನ್ನು ಗಮನಿಸುತ್ತಾ, ಕೆಟ್ಟದು ಮಾಡುವವರಿಗೆ ಶಿಕ್ಷೆ, ಒಳ್ಳೆಯದು ಮಾಡುವವರಿಗೆ ಬಹುಮಾನ ಮಾಡುತ್ತಾನೆ.

10) ದೇವರು ಕೊಟ್ಟಿರುವುದು 10 ಕಮಾಂಡ್‌ಮೆಂಟ್ಸು (ಆಜ್ಞೆಗಳು) ಮೂಲಕ ದೇವರ ಹತ್ತಿರಕ್ಕೆ ಸೇರಿಕೊಳ್ಳಬಹುದು.

11) ಸ್ವಲ್ಪಜನ ಯೇಸುಪ್ರಭುವನ್ನು ದೇವರ ಹತ್ತಿರದಿಂದ ಬಂದಿರುವ ದೂತ ಎಂದು ನಂಬುತ್ತಾರೆ, ಸ್ವಲ್ಪಜನ ಒಪ್ಪಿಕೊಳ್ಳುವುದಿಲ್ಲ.

## 8) ಬಾಹಾಯಿ ಮತ

1) ಮತದ ಹೆಸರು – ಬಾಹಾಯಿ ಮತ

2) ಹುಟ್ಟಿದ ದೇಶ – ಇರಾನ್

3) ಹುಟ್ಟಿದ ಸಂ॥ – 1863ಸಂ॥ ಕ್ರಿ. ನಂತರ

4) ಮತ ಪ್ರವಕ್ತ – ಬಹಾ ಉಲ್ಲಾಹ್

5) ಮತ ಜನಸಂಖ್ಯೆ – 70 ಲಕ್ಷಗಳು

6) ಮತ ಸ್ಥಾನ – ಎಂಟನೇ ಸ್ಥಾನ



(ಮತ ಗುರುತು)

7) ಒಬ್ಬನೇ ದೇವರು ಇದ್ದಾನೆಂದು ನಂಬುತ್ತಾರೆ.

8) ದೇವರು ಸರ್ವಶಕ್ತಿಗಳು ಹೊಂದಿ, ಆರಂಭ, ಅಂತ್ಯ ಇಲ್ಲದೆ ಇದ್ದಾನೆ.

9) ಕೃಷ್ಣ, ಯೇಸುಪ್ರಭು, ಮೊಸೆಸ್, ಮಹಮ್ಮದ್‌ಪ್ರವಕ್ತ, ಬುದ್ಧ ಎಲ್ಲರೂ ದೇವರನ್ನು ಕುರಿತು ತಿಳಿಸುವುದಕ್ಕೆ ಬಂದಿರುವ ದೂತರು.

10) ದೇವರನ್ನು ಸೇರಿಕೊಳ್ಳಬೇಕೆಂದರೆ ದೂತರು ಹೇಳಿದಹಾಗೆ ಅನುಸರಿಸಬೇಕು.

11) ಎಲ್ಲಾ ಮತಗಳು ಒಂದೇ ಭಾವದ ಮೇಲೆ ಏರ್ಪಟ್ಟಿವೆ, ಭವಿಷ್ಯತ್ತಿನಲ್ಲಿ ಎಲ್ಲಾ ಮತಗಳು ಒಂದೇ ಆಗುತ್ತವೆಂದು ನಂಬುತ್ತಾರೆ.

13) ಈ ಮತ ಸಂಸ್ಥಾಪಕನು ಬಹ್ಯೆ. ಉಲ್ಲಾನಿ ದೇವರ ದೂತ ಎಂದು ನಂಬುತ್ತಾರೆ.

## 9) ಕನ್‌ಪ್ಯೂಷಿಯಸ್ ಮತ


(ಮತ ಗುರುತು)

1) ಮತದ ಹೆಸರು – ಕನ್‌ಫ್ಯೂಷಿಯಸ್
2) ಹುಟ್ಟಿದ ದೇಶ – ಚೈನಾ
3) ಹುಟ್ಟಿದ ಸಂ॥ – 520ಸಂ॥ ಕ್ರಿ.ಪೂರ್ವ
4) ಮತ ಪ್ರವಕ್ತ – ಕನ್‌ಫ್ಯೂಷಿಯಸ್
5) ಮತ ಜನಸಂಖ್ಯೆ – 60 ಲಕ್ಷಗಳು
6) ಮತ ಸ್ಥಾನ – ಒಂಭತ್ತನೇ ಸ್ಥಾನ
7) ಈ ಮತದಲ್ಲಿ ದೇವರನ್ನು ಕುರಿತು ಎಂತಹ ಮಾತು ಇಲ್ಲ.
8) ಈ ಮತದಲ್ಲಿ ಕೇವಲ ನೀತಿಯನ್ನು ಬೋಧಿಸುತ್ತದೆ.

## 10) ಜೈನ ಮತ



(ಮತ ಗುರುತು)

1) ಮತದ ಹೆಸರು – ಜೈನ ಮತ
2) ಹುಟ್ಟಿದ ದೇಶ – ಭಾರತ ದೇಶ
3) ಹುಟ್ಟಿದ ಸಂ॥ – 550ಸಂ॥ಕ್ರಿ.ಪೂರ್ವ
4) ಮತ ಪ್ರವಕ್ತ – ವರ್ಧಮಾನಮಹಾವೀರ
5) ಮತ ಜನಾಭಾ – 42 ಲಕ್ಷಗಳು
6) ಮತ ಸ್ಥಾನ – ದಶಮ ಸ್ಥಾನ
7) ಈ ಮತದಲ್ಲಿ ದೇವರು ಎಂಬ ಪ್ರತ್ಯೇಕ ಶಕ್ತಿಯನ್ನು ಕುರಿತು ಹೇಳಿದ್ದಾರೆ.
8) ಎಲ್ಲರಲ್ಲಿ ಆತ್ಮ ಇದೆ, ಆ ಆತ್ಮಕ್ಕೆ ಎಲ್ಲಾ ತಿಳಿದಿದೆ.

9) ವಸ್ತುಗಳಿಗೆ ದೂಳು ಅಂಟಿದಹಾಗೆ, ಆತ್ಮಕ್ಕೆ ಕರ್ಮ ಅಂಟಿದೆ.

10) ಕರ್ಮಗಳು ಇಲ್ಲದಹಾಗೆ ಮಾಡಿಕೊಂಡ ಮನುಷ್ಯರನ್ನು ಅವರಿಗಿಂತ ದೊಡ್ಡದಾಗಿ ಪೂಜಿಸುತ್ತಾರೆ.

## 11) ಷಿಂಟೋ ಮತ

1) ಮತದ ಹೆಸರು – ಷಿಂಟೋ ಮತ

2) ಹುಟ್ಟಿದ ದೇಶ – ಜಪಾನ್

3) ಹುಟ್ಟಿದ ಸಂ॥ – 6ನೆ.ಶ.ಕ್ರಿ.ಪೂರ್ವ

4) ಮತ ಪ್ರವಕ್ತ – ತಿಳಿದಿಲ್ಲ

5) ಮತ ಜನಸಂಖ್ಯೆ – 40 ಲಕ್ಷಗಳು


(ಮತದ ಗುರುತು)

6) ಮತ ಸ್ಥಾನ – ಏಕಾದಶ ಸ್ಥಾನ

7) ಪ್ರತ್ಯೇಕ ದೇವರು ಅಂತೂ ಯಾರೂ ಇರುವುದಿಲ್ಲ.

8) 'ಕಾಯಿ' ಎಂದು ಕರೆಯಲ್ಪಡುವ ಅದೃಶ್ಯ ಶಕ್ತಿಗಳು ಪ್ರಾಣಗಳಲ್ಲಿಯೂ, ಗಿಡಗಳಲ್ಲಿಯೂ, ಬೆಟ್ಟಗಳಲ್ಲಿಯೂ, ಮನುಷ್ಯನಲ್ಲಿಯೂ ಇರುತ್ತದೆ.

9) 'ಕಾಮಿ'ಯನ್ನು ಕೆಲವು ವ್ಯಕ್ತಿಗಳ ರೂಪದಲ್ಲಿ ತೋರಿಸಿ, ಅವರನ್ನೇ ದೇವತೆಗಳಾಗಿ ಪೂಜಿಸಿದ್ದಾರೆ.

## 12) ಜೊರಾಸ್ಟ್ರಿಯನ್ ಮತ

1) ಮತದ ಹೆಸರು – ಜೊರಾಷ್ಟ್ರಿಯನ್

2) ಹುಟ್ಟಿದ ದೇಶ – ಇರಾನ್ (ಪರ್ಷಿಯಾ)

3) ಹುಟ್ಟಿದ ಸಂ॥ – 6ನೇ ಶತಾಬ್ಧ ಕ್ರಿ. ಪೂರ್ವದಲ್ಲಿ

4) ಮತ ಪ್ರವಕ್ತ – ಜೊರಾಸ್ಟರ್


(ಮತದ ಗುರುತು)

5) ಮತ ಜನಸಂಖ್ಯೆ – 26 ಲಕ್ಷಗಳು

6) ಮತ ಸ್ಥಾನ – ಕೊನೆಯ ಸ್ಥಾನ ದ್ವಾದಶ ಸ್ಥಾನ.

7) ಈ ಮತದಲ್ಲಿ 'ಅಹುರ ಮಜ್ದಾ' ನಿಯನ್ನು ದೇವರು ಎಂದು ಹೇಳುತ್ತಾರೆ.

8) 'ಅಂಗ್ರವಮೈನ್ಯು' ಎನ್ನುವ ಮತ್ತೊಂದು ಶಕ್ತಿ, "ಅಹುರಮಜ್ದಾ" ಗೆ ವಿರುದ್ಧವಾಗಿದೆ.

9) ಒಳ್ಳೆಯ ಕೆಲಸಗಳು ಮಾಡಿದರೆ ಸ್ವರ್ಗಕ್ಕೆ, ಕೆಟ್ಟ ಕೆಲಸಗಳು ಮಾಡಿದರೆ ನರಕಕ್ಕೆ ಹೋಗುತ್ತಾರೆ.

ಈ ವಿಧವಾಗಿ ಒಟ್ಟಾರೆ ಪ್ರಪಂಚವೆಲ್ಲಾ ಹನ್ನೆರಡು ಮತಗಳು ವ್ಯಾಪಿಸಿವೆ. ಎಲ್ಲಾ ದೇಶಗಳಲ್ಲಿಯೂ ನಾಸ್ತಿಕ ಮತ ಎನ್ನುವುದು ಸಹ ಒಂದು ಇದೆ. ನಾಸ್ತಿಕಮತದಲ್ಲಿ ದೇವರು ಇಲ್ಲವೆಂದು ವಾದಿಸುವುದೇ ಅವರ ಕೆಲಸವಾಗಿದೆ. ಹನ್ನೆರಡು ಮತಗಳಲ್ಲಿ ಭೌದ್ಧ ಹೊರತು ಉಳಿದ ಮತಗಳು ದೇವರಿದ್ದಾನೆಂದು ವಾದಗಳು ಮಾಡುತ್ತಾ, ಅವರವರ ಭಾವಗಳನ್ನು ಬೇರೆಬೇರೆ ರೂಪಗಳಲ್ಲಿ ತಿಳಿಸುವುದರಿಂದ, ಅವರ ಭಾವವನ್ನು ಅನುಸರಿಸಿ ಬೇರೆಬೇರೆ ಮತಗಳಾಗಿ ಹೇಳಲ್ಪಡುತ್ತಿವೆ. ಉದಾಹರಣೆಗೆ ಕದಲದ ಕಲ್ಲನ್ನೇ ದೇವರಾಗಿ ಆರಾಧಿಸಬೇಕೆಂದು, ಕಲ್ಲಿನಲ್ಲಿ ಯಾವ ಗುಣ ಭಾವಗಳು ಇಲ್ಲವಾದ್ದರಿಂದ, ಕಲ್ಲನ್ನು ದೇವರಾಗಿ ಭಾವಿಸಿ ಪೂಜಿಸಬೇಕೆಂದು ಒಬ್ಬನು ಹೇಳಿದಾಗ ಅವನದು ಕಲ್ಲುಮತವೆಂದು, ಪ್ರತ್ಯೇಕ ಮತವೆಂದು ಹೆಸರಿಡುವುದು ನಡೆದಿದೆ. ನಂತರ ಇನ್ನೊಬ್ಬನು ಬಂದು ಕಲ್ಲನ್ನು ಗುಂಡನ್ನು ದೇವರಾಗಿ ಭಾವಿಸಬಾರದು. ಪ್ರಾಣ ಇಲ್ಲದಿರುವುದನ್ನು ದೇವರ ಗುರುತಾಗಿ ಇಡಬಾರದು. ಪ್ರಾಣವಿರುವುದನ್ನೇ ದೇವರ ಗುರುತಾಗಿ ಇಡಬೇಕೆಂದು ಒಂದು ಜಂತುವನ್ನು ದೇವರ ಗುರುತಾಗಿ ಇಟ್ಟಿದ್ದಾನೆಂದು ಕೊಳ್ಳೋಣ. ಆಗ ಅವನ ಮತ ಬೇರೆಯೆಂದು, ಅವನದು ಜಂತುಮತವೆಂದು ಕರೆಯುತ್ತಾರೆ. ಇನ್ನೊಬ್ಬನು ಬಂದು ದೇವರಿಗೆ ಸಮಾನವಾಗಿ ಪ್ರಪಂಚದಲ್ಲಿ ಯಾವುದು ಇಲ್ಲ. ದೇವರಿಗೆ ಸಮಾನವಾಗಿ ಏನನ್ನು ಇಡಬಾರದು. ದೇವರು ಎಲ್ಲದಕ್ಕಿಂತ ದೊಡ್ಡವನು, ದೇವರು ಎಲ್ಲದಕ್ಕಿಂತ ಅತೀತನು, ಆದ್ದರಿಂದ ಕಲ್ಲನ್ನಾಗಲೀ, ಪ್ರಾಣಿಯನ್ನಾಗಲೀ ಪೂಜಿಸುವವರು ಅಜ್ಞಾನಿಗಳಾಗುವರು.

ಆದ್ದರಿಂದ ನಿರಾಕಾರವನ್ನೇ ಪೂಜಿಸಬೇಕೆಂದು ಒಬ್ಬನು ಹೇಳಿದಾಗ, ಆಗ ಆತನದು ನಿರಾಕಾರ ಮತವೆಂದು ಕರೆಯಲ್ಪಟ್ಟಿದೆ. ಈ ವಿಧವಾಗಿ ಪ್ರಪಂಚ ವ್ಯಾಪ್ತವಾಗಿರುವ ಹನ್ನೆರಡು ಮತಗಳು ಹನ್ನೆರಡು ದಾರಿಗಳನ್ನು ತೋರಿಸುತ್ತಿವೆ. ಹಾಗೆ ಹನ್ನೆರಡುಜನ ಪ್ರವಕ್ತರು ಹನ್ನೆರಡು ದಾರಿಗಳು ತೋರಿಸುವುದಲ್ಲದೆ, ನನ್ನದಾರಿಯೇ ಶ್ರೇಷ್ಠವಾದುದೆಂದು ಒಬ್ಬ ಪ್ರವಕ್ತ ಅಂದರೆ, ಇಲ್ಲ ಎಲ್ಲರಿಗಿಂತ ನನ್ನ ದಾರಿಯೇ ಶ್ರೇಷ್ಠವಾದುದೆಂದು ಮತ್ತೊಬ್ಬ ಪ್ರವಕ್ತ ಎನ್ನುತ್ತಿದ್ದಾನೆ. ಈ ವಿಧವಾಗಿ ಹನ್ನೆರಡುಜನ ಹನ್ನೆರಡು ಮತಗಳನ್ನು ಏರ್ಪಡಿಸುವುದು ನಡೆದಿದೆ. ಪ್ರಸ್ತುತ ಭಾರತ ದೇಶದಲ್ಲಿ ಹನ್ನೆರಡು ಮತಗಳು ಇಲ್ಲದಿದ್ದರೂ ಐದಾರು ಮತ ಪ್ರಜಗಳಾದರೂ ಇದ್ದಾರೆ. ಎಲ್ಲದಕ್ಕಿಂತ ಮುಖ್ಯವಾಗಿ ಮೂರು ಮತಗಳಿವೆ. ಹಿಂದೂ, ಇಸ್ಲಾಮ್, ಕ್ರೈಸ್ತ ಎಂಬ ಮೂರು ಮತಗಳು ಭಾರತದೇಶದಲ್ಲಿ ಎಲ್ಲಿಯಾದರೂ ಕಾಣಿಸಬಲ್ಲವು.

ಜನಸಂಖ್ಯೆಯಲ್ಲಾಗಲಿ, ಜ್ಞಾನದಲ್ಲಾಗಲಿ, ಹಿಂದೂ, ಇಸ್ಲಾಮ್, ಕ್ರೈಸ್ತ ಎಂಬ ಮೂರು ಮತಗಳೇ ಉಳಿದ ಎಲ್ಲಾ ಮತಗಳಿಗಿಂತ ಮುನ್ನೆಜ್ಜೆಯಲ್ಲಿವೆ. ಮೊದಲ ಮೂರು ಸ್ಥಾನಗಳನ್ನು ಈ ಮೂರು ಮತಗಳೇ ಅಕ್ರಮಿಸಿವೆ. ಮೂರರಲ್ಲಿ ಕ್ರೈಸ್ತವು ಜನಸಂಖ್ಯೆಯಲ್ಲಿ ಪ್ರಥಮ ಸ್ಥಾನದಲ್ಲಿರುವಾಗ, ಎರಡನೇ ಸ್ಥಾನವಾಗಿ ಇಸ್ಲಾಮ್ ಮತ ಇದೆ. ಮೂರನೇ ಸ್ಥಾನದಲ್ಲಿ ಹಿಂದೂಮತ ಇದೆ. ಈ ಮೂರು ಸ್ಥಾನಗಳಲ್ಲಿರುವ ಮತ ಗ್ರಂಥಗಳಲ್ಲಿ ಮೂರನೆ ಸ್ಥಾನದಲ್ಲಿರುವ ಹಿಂದೂಮತಕ್ಕೆ ಸಂಬಂಧಿಸಿದ ಭಗವದ್ಗೀತೆ ಜ್ಞಾನದಲ್ಲಿ ಪ್ರಥಮ ದೈವಗ್ರಂಥವಾಗಿ ಇದೆ. ಮೊದಲ ಸ್ಥಾನದಲ್ಲಿರುವ ಕ್ರೈಸ್ತ ಮತಗ್ರಂಥವಾದ ಬೈಬಲ್ ದ್ವಿತೀಯ ಸ್ಥಾನದಲ್ಲಿದೆ. ಮಧ್ಯಸ್ಥಾನದಲ್ಲಿರುವ ಇಸ್ಲಾಮ್ ಮತವೊಂದರ ಗ್ರಂಥ ಖುರ್ಆನ್ ಅಂತಿಮ ದೈವಗ್ರಂಥವಾಗಿ ಮೂರನೆಯ ಸ್ಥಾನದಲ್ಲಿ ಇದೆ.

ಹನ್ನೆರಡು ಮತಗಳಲ್ಲಿ ಒಂದು ಹಿಂದೂಮತದ ಹೆಸರು ಬದಲಾಗಿದೆ. ಉಳಿದ ಹನ್ನೊಂದು ಮತಗಳು ಹುಟ್ಟಿದಾಗ ಇಟ್ಟಿರುವ ಹೆಸರಿನಿಂದಲೇ ಇವೆ. ಒಂದೇ ಒಂದು ಇಂದೂತ್ವ ಇಲ್ಲವೆ ಹಿಂದೂ ಸಮಾಜ ಹೆಸರು ಬದಲಾಯಿಸಿ

ಕೊಂಡು ಈದಿನ ಹಿಂದೂಮತವಾಗಿ ಇದೆ. ಅದು ಹೆಸರು ಬದಲಾಯಿಸಿ ಕೊಳ್ಳಲಿಲ್ಲ ಆದರೆ ಮನುಷ್ಯರೇ ಅದರ ಹೆಸರನ್ನು ಬದಲಾಯಿ ಸಿದ್ದಾರೆ. ಎಷ್ಟೋ ದೊಡ್ಡ ಅರ್ಥದಿಂದ ಕೂಡಿಕೊಂಡ ಹೆಸರುಹೋಗಿ, ಕೊನೆಗೆ ಅರ್ಥವಿಲ್ಲದ ಹೆಸರು ಇಂದುಗಳಿಗೆ ಬಂದು ಹಿಂದೂಗಳಾಗಿ ಕರೆಯಲ್ಪಡುತ್ತಿದ್ದಾರೆ. ಇಂದೂಗಳು ಎಂದರೆ ಜ್ಞಾನಿಗಳು ಅಥವಾ ಜ್ಞಾನಶಕ್ತಿ ಇರುವವರು ಎಂದು ಅರ್ಥವಿತ್ತು. ಅಷ್ಟು ದೊಡ್ಡ ಅರ್ಥವಿರುವ ಹೆಸರು ಇಲ್ಲದಹಾಗೆಹೋಗಿ ಅರ್ಥವಿಲ್ಲದ ಹೆಸರು ತಗುಲಿಕೊಂಡಿದೆ. ಈದಿನ ಹೆಸರು ಬದಲಾಯಿಸಿಕೊಂಡ ಹಿಂದೂಮತ ಹೊರತು ಉಳಿದ ಹನ್ನೊಂದು ಮತಗಳು ಕಲಿಯುಗದಲ್ಲಿ ಹುಟ್ಟಿರುವವೇ. ಒಂದು ಹಿಂದೂಮತ ಎನ್ನಲ್ಪಡುವ ಇಂದೂಸಮಾಜ ನಾಲ್ಕು ಯುಗಗಳಿಗಿಂತ ಮೊದಲು ಯಾವಾಗ ತಯಾರಾಗಿರುವುದು ಯಾರಿಗೂ ತಿಳಿದಿಲ್ಲ. ಇಂದೂ ಎನ್ನುವ ಹೆಸರು ಸೃಷ್ಠಿ ಆದಿಯಲ್ಲಿಯೇ ಬಂದಿದೆ ಆದ್ದರಿಂದ ಹಿಂದೂಮತ ಸೃಷ್ಠಿ ಆದಿಯಲ್ಲಿಯೇ ಹುಟ್ಟಿದೆಯೆಂದು ಹೇಳಬಹುದು. ಆದರೆ ಸೃಷ್ಠಿ ಆದಿ ಯಾವಾಗ ನಡೆದಿರುವುದು ಯಾರಿಗೂ ತಿಳಿದಿಲ್ಲ. ಆದ್ದರಿಂದ ಹಿಂದೂಮತ (ಇಂದೂ ಸಮಾಜ) ಯಾವಾಗ ಹುಟ್ಟಿರುವುದು ಯಾರಿಗೂ ತಿಳಿದಿಲ್ಲ. ಇದನ್ನನುಸರಿಸಿ ಈಗಿರುವ ಎಲ್ಲಾ ಮತಗಳಿಗಿಂತ ಎಷ್ಟೋ ಮುಂದೆ ಹುಟ್ಟಿದೆ, ಎಷ್ಟೋ ಅನುಭವ ಇರುವುದು ಹಿಂದೂಮತವೆಂದು ತಿಳಿದುಹೋ ಗುತ್ತಿದೆ.

ಹಿಂದೂಮತ ಯಾವಾಗ ಹುಟ್ಟಿದೆಯೋ ತಿಳಿಯದಹಾಗೇ ಇದಕ್ಕೆ ಪ್ರವಕ್ತ ಯಾರೋ ಸಹ ಯಾರಿಗೂ ತಿಳಿದಿಲ್ಲ. ಪ್ರವಕ್ತ ಇಲ್ಲದ ಮತ ಮೊದಲು ಭೂಮಿಮೇಲೆ ಹೇಗೆ ಬಂದಿದೆಯೋ, ಯಾರು ಅದನ್ನು ತಂದಿದ್ದಾರೋ ಗಮನಿಸಿ ನೋಡೋಣ. ಈದಿನ ಹಿಂದೂಮತವಾಗಿ ಇರುವುದು ಪೂರ್ವದಲ್ಲಿ ಕಲಿಯುಗಕ್ಕಿಂತಲೂ ಮೊದಲೇ "ಇಂದೂ ಸಮಾಜ" ಎಂಬ ಹೆಸರಿನಲ್ಲಿ ಇತ್ತು. ಸಮಾಜ ಎಂದರೇ ಸಮವಾಗಿ ಹುಟ್ಟಿರುವುದೆಂದು ಅರ್ಥ. ಆ ದಿನ ಇಂದೂಗಳೆಲ್ಲರೂ ಸಮಾನವಾಗಿ, ಎಲ್ಲರೂ ಸಮಾನ ಜ್ಞಾನಿಗಳಾಗಿರುತ್ತಿದ್ದರು.

ಕೃತಯುಗ, ತ್ರೇತಾಯುಗ, ದ್ವಾಪರಯುಗ ಮೂರು ಯುಗಗಳಲ್ಲಿ ಇಂದೂ ಸಮಾಜವಾಗಿರುವ ಇಂದೂತ್ವ ಕಲಿಯುಗದಲ್ಲಿ ಮೂರುಸಾವಿರ ವರ್ಷಗಳು ಕಳೆದ ನಂತರ, ಇಂದೂ ಸಮಾಜದ ಹೆಸರುಬದಲಾಗಿಹೋಗಿ ಹಿಂದೂಮತವಾಗಿ ತಯಾರಿಯಾಗಿದೆ. ಮತಕ್ಕೆ ಪ್ರವಕ್ತ ಇರುತ್ತಾನೆ. ಮತವಲ್ಲದಿರುವುದಕ್ಕೆ ಪ್ರವಕ್ತ ಇರುವುದಿಲ್ಲ. ಮತ ಪ್ರವಕ್ತ ಮುಖಾಂತರ ಸೃಷ್ಠಿಸಲ್ಪಟ್ಟು, ಪ್ರವಕ್ತ ಮೂಲಕ ಹೊರಗೆ ಪ್ರಚಾರವಾಗುತ್ತಿದೆ. ಆದರೆ ಮೊದಲು ಮತವೇಯಾಗಲಿ ಇಂದೂತ್ವಕ್ಕೆ ಪ್ರವಕ್ತ ಯಾರೂ ಇಲ್ಲ. ಆದರೆ ಇಂದೂತ್ವ ಎನ್ನುವುದು ಹೇಗೆ ಬಂದಿದೆಯೆಂದು ಪ್ರಶ್ನಿಸಿಕೊಂಡು ನೋಡಿದರೇ ಇಂದೂತ್ವ ಎಂಬುವುದು ದೈವಜ್ಞಾನ ಆಗಿರುವು ದರಿಂದ ಅದನ್ನು ದೇವರೇ ಹೇಳಿದ್ದಾನೆಂದು ನಾವು ಹೇಳಬಹುದು. ಮತ ಎಂಬುದು ಪೂರ್ತಿ ದೈವಜ್ಞಾನ ಅಲ್ಲದೆ, ದೈವಜ್ಞಾನದಿಂದ ಕೂಡಿದ ಪ್ರಕೃತಿ ಸಂಪ್ರದಾಯಗಳಿಂದ ಕೂಡಿರುವುದಾಗಿದೆ. ದೈವಜ್ಞಾನ ಸ್ವಲ್ಪ, ಪ್ರಕೃತಿ ಜ್ಞಾನ ಬಹಳ ಬೆರೆತಿರುವುದನ್ನು ಮತ ಎನ್ನಬಹುದು. ಈದಿನ ಕಲಿಯುಗದಲ್ಲಿ ತಯಾರಿಯಾದ ಹನ್ನೊಂದು ಮತಗಳು ಸ್ವಲ್ಪ ದೈವಜ್ಞಾನ, ಹತ್ತರಷ್ಟು ಪ್ರಪಂಚ ಜ್ಞಾನ ಬೆರೆತು ತಯಾರಾಗಿವೆಯೆಂದು ಹೇಳಬಹುದು. ಇಂದೂ ಸಮಾಜ ಕೃತಯುಗದಲ್ಲಿ ತಯಾರಾದಾಗ ಎಲ್ಲಾ ದೈವಜ್ಞಾನದಿಂದ ತುಂಬಿಕೊಂಡಿರುತ್ತಿತ್ತು. ಕಲಿಯುಗದಲ್ಲಿ ಮತವಾಗಿ ಬದಲಾದ ನಂತರ ಸ್ವಲ್ಪ ಜ್ಞಾನರೂಪದಲ್ಲಿ ಇದ್ದರೂ, ಪ್ರಕೃತಿ ಜ್ಞಾನ ಸಹ ಬೆರೆತು ಮತಕ್ಕೆ ತಕ್ಕಂತೆ ತಯಾರಿಯಾಗಿದೆ.

ಸೃಷ್ಠಿ ಆದಿಯಲ್ಲಿಯೇ ತಯಾರಿಯಾದ ಇಂದೂಸಮಾಜ ಪೂರ್ತಿ ಇಂದೂ ಧರ್ಮಗಳಿಂದ ಕೂಡಿಕೊಂಡಿರುವುದಾಗಿ ತಯಾರಿಯಾಗಿದೆ. ಆ ದಿನ ಇಂದೂ ಧರ್ಮಗಳನ್ನು ನೆಲೆಗೊಳಿಸಿ, ಇಂದೂಸಮಾಜವನ್ನು ತಯಾರು ಮಾಡಿದವನು, ಪ್ರಪಂಚಕ್ಕೆ ಆದಿಗುರುವಾಗಿ ಲೆಕ್ಕಿಸಲ್ಪಡುತ್ತಿರುವ ಸೂರ್ಯನೇ ಎಂದು ಹೇಳಬಹುದು. ಸೂರ್ಯನು ಒಂದು ಗ್ರಹ ಆಗಿದ್ದೂ ಆದಿನ ಆಕಾಶವಾಣಿಯಿಂದ ಬಂದಿರುವ ಜ್ಞಾನವನ್ನು ಗ್ರಹಿಸಲ್ಪಟ್ಟಿದ್ದಾನೆ. ದೇವರು ಸೂರ್ಯನ ಮೂಲಕ ಪ್ರಪಂಚಕ್ಕೆ ಜ್ಞಾನ ತಿಳಿಯಬೇಕೆಂಬ ಉದ್ದೇಶದಿಂದ

ಆಕಾಶವಾಣಿ ಮೂಲಕ ಜ್ಞಾನವನ್ನು ಸೂರ್ಯನಿಗೆ ತಿಳಿಸಿದ್ದಾನೆ. ಸೂರ್ಯನು ವಾಣಿ ಮೂಲಕ ಬಂದಿರುವ ಜ್ಞಾನವನ್ನು ಗ್ರಹಿಸಿ, ತಾನು ಗ್ರಹಿಸಿದ ಜ್ಞಾನವನ್ನು ಮೊಟ್ಟಮೊದಲು ಭೂಮಿಮೇಲೆ ಮನುವು ಎಂಬ ವ್ಯಕ್ತಿಗೆ ತಿಳಿಸಿದ್ದಾನೆ. ಹಾಗೆ ಭೂಮಿಮೇಲೆ ಮನುಷ್ಯರಿಗೆ ಜ್ಞಾನವನ್ನು ತಿಳಿಸಿದ ಮೊದಲನೆಯವನು ಸೂರ್ಯನು. ಆದ್ದರಿಂದ ಸೂರ್ಯನನ್ನು ಆ ದಿನಗಳಲ್ಲಿ ಆದಿಗುರು ಎಂದು ಕರೆಯುತ್ತಿದ್ದರು. ಗುರುವಿಗೆ ನಮಸ್ಕರಿಸಬೇಕೆಂಬ ಸಂಪ್ರದಾಯಕ್ಕೆ ಅನುಗುಣವಾಗಿ, ಆದಿಗುರುವಾದ ಸೂರ್ಯನಿಗೆ ಮೊದಲ ಶಿಷ್ಯರಾದ ಮಾನವಜಾತಿಯೆಲ್ಲವೂ ಸೂರ್ಯನಿಗೆ ಉದಯದಲ್ಲಿ ನಮಸ್ಕರಿಸುತ್ತಿದ್ದರು. ಅದನ್ನೇ ಸೂರ್ಯನಮಸ್ಕಾರ ಎಂಬ ಹೆಸರಿನಿಂದ ಹೇಳುತ್ತಿದ್ದರು. ಸೂರ್ಯನು ಮಾನವಜಾತಿಗೆ ಆದಿಗುರುವು ಎಂಬ ಭಾವನೆಯಿಂದ ಮನುಷ್ಯರೆಲ್ಲರೂ ಪೂರ್ವದಲ್ಲಿ ಸೂರ್ಯನಿಗೆ ಪ್ರತಿ ಉದಯವೂ ನಮಸ್ಕರಿಸುತ್ತಿದ್ದರು. ಬೆಳಿಗ್ಗೆಯೇ ಸೂರ್ಯನಮಸ್ಕಾರ ಮಾಡುವ ಸಂಪ್ರದಾಯ (50) ಐವತ್ತು ವರ್ಷಗಳ ಕೆಳಗೆ ಸಹ ಇತ್ತು. ಪ್ರಸ್ತುತ ಕಾಲದಲ್ಲಿ ಸೂರ್ಯನಮಸ್ಕಾರಗಳು ಮಾಡುವವರೇ ಕಾಣಿಸದಹಾಗೆ ಹೋಗಿದ್ದಾರೆ. ಇಂದೂತ್ವ ಹಿಂದೂಮತವಾಗಿ ಬದಲಾಗಿ ಹೋದ ನಂತರ ಮನುಷ್ಯರಲ್ಲಿನ ಜ್ಞಾನ ಸಹ ಬದಲಾಗಿಹೋಗಿ ಪೂರ್ವದಲ್ಲಿರುವ ಜ್ಞಾನಿಗಳು ಈದಿನ ಮತಸ್ಥರಾಗಿ ಬದಲಾಗಿಹೋಗಿದ್ದಾರೆ.

**ಅಂತಿಮ ದೈವಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ** ಹೇಳಿದ ವಾಕ್ಯವನ್ನು ಅನುಸರಿಸಿ ನೋಡಿದರೆ **"ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡದೆಯೇ ತನ್ನ ಜ್ಞಾನವನ್ನು ಭೂಮಿಮೇಲಿರುವ ಪ್ರಜೆಗಳಿಗೆ ಮೂರು ವಿಧಗಳಲ್ಲಿ ತಿಳಿಸುತ್ತಾನೆ."** ಎಂದು ಇದೆ ಅಲ್ಲವೆ! ಅದರಪ್ರಕಾರ ಒಂದು ವಾಣಿ ಮೂಲಕ ಜ್ಞಾನವನ್ನು ತಿಳಿಸುತ್ತೇನೆ ಎಂದು ಹೇಳಿದ್ದಾನೆ. ಆ ಮಾತಿನಪ್ರಕಾರ ಆಕಾಶವಾಣಿ ಮೂಲಕ ಸೂರ್ಯನಿಗೆ ಜ್ಞಾನವನ್ನು ತಿಳಿಸಿದ್ದಾನೆ. ದೇವರು ಹೇಳಿದ ಮೂರು ವಿಧಾನಗಳಲ್ಲಿ ಒಂದು ವಿಧಾನವನ್ನು ಸೃಷ್ಠಿ ಆದಿಯಲ್ಲಿಯೇ ನೆರವೇರಿಸಿದ್ದಾನೆ. ಇನ್ನು ಉಳಿದಿರುವವು ಎರಡು ವಿಧಾನಗಳು. ಅದರಲ್ಲಿ

ತೆರೆಹಿಂಬದಿಯಿಂದ ಜಿಬ್ರಯೇಲ್ ದೇವರ ಜ್ಞಾನವನ್ನು ಮುಹಮ್ಮದ್ ಪ್ರವಕ್ತರಿಗೆ ಹೇಳಿದಹಾಗೆ ಹೇಳಿಕೊಂಡಿದ್ದೇವೆ. ಆಗ ಅಲ್ಲಿ ಒಂದು ಗ್ರಂಥ, ಒಬ್ಬ ಬೋಧಕನು ತಿಳಿದುಹೋದಂತೆ ಸಹ ಹೇಳಿಕೊಂಡಿದ್ದೇವೆ. ದೇವರು ತಿಳಿಸಿದ ಮೂರು ವಿಧಾನಗಳಲ್ಲಿ ಎರಡು ವಿಧಾನಗಳ ಮೂಲಕ ಜ್ಞಾನ ಹೇಳಿದರೂ ಕೊನಗೆ ನಮಗೆ ಹೊರಬಿದ್ದಿರುವುದು ಒಬ್ಬ ಬೋಧಕನು, ಒಂದು ಗ್ರಂಥ ಮಾತ್ರವೇ. ಇನ್ನು ದೇವರು ತಿಳಿಸಬೇಕಾದ ವಿಧಾನ ಒಂದು ಮಾತ್ರ ಉಳಿದಿದೆ. ಆದರೆ ಇಲ್ಲಿ ಕೆಲವರಿಗೆ ಒಂದು ಪ್ರಶ್ನೆಬಂದು ಅವರು ಹೀಗೆ ಕೇಳಬಹುದು. ಅದೇನೆಂದರೆ! ದೇವರು ಆಕಾಶವಾಣಿ ಮೂಲಕ ತನ್ನ ಜ್ಞಾನವನ್ನು ತಿಳಿಸಿದಾಗ ಕೇಳಿಸಿಕೊಂಡ ಸೂರ್ಯನು ಭೂಮಿಮೇಲೆ ಪ್ರಜೆಗಳಿಗೆ ಆ ಜ್ಞಾನವನ್ನು ತಿಳಿಸಿದ್ದಾನೆ ಅಲ್ಲವೆ! ಆ ವಿಧವಾಗಿ ತಿಳಿಸಿದ ಸೂರ್ಯನನ್ನು ನೀವು ಆದಿಗುರುವಾಗಿ ಪ್ರಜೆಗಳು ಲೆಕ್ಕಿಸಿ ಪ್ರತಿ ದಿನ ಉದಯ ಸೂರ್ಯನಿಗೆ ನಮಸ್ಕರಿಸುತ್ತಿದ್ದರೆಂದು ನೀವೇ ಹೇಳಿದ್ದೀರಾ ಅಲ್ಲವೆ! ಆಗ ಹೇಳಿದ ನಿಮ್ಮ ಮಾತಿನಪ್ರಕಾರ ಸೂರ್ಯನು ಒಬ್ಬ ಗುರುವಾಗಿ ಹೊರಬಿದ್ದಿದ್ದಾನೆ ಅಲ್ಲವೆ! ಇದರ ಪ್ರಕಾರ ಈಗ ಒಬ್ಬ ಬೋಧಕನು, ಒಬ್ಬ ಗುರುವು, ಒಂದು ಗ್ರಂಥ ತಿಳಿದುಹೋಗಿದೆ. ಇನ್ನು ತಿಳಿಸಬೇಕಾಗಿರುವುದು ಒಬ್ಬ ಗುರುವು, ಎರಡು ಗ್ರಂಥಗಳು ಮಾತ್ರವೇಯೆಂದು, ಹಾಗಲ್ಲದೆ ನೀವು ಇಬ್ಬರು ಗುರುಗಳು ತಿಳಿಯಬೇಕಾಗಿದೆಯೆಂದು, ಇಲ್ಲಿಯವರೆಗು ತಿಳಿದಿರುವುದು ಒಬ್ಬ ಬೋಧಕನು, ಒಂದು ಗ್ರಂಥ ಮಾತ್ರವೇ ಎಂದಿದ್ದೀರ. ನೀವು ಹೇಳಿದಹಾಗೆ ತಿಳಿದಿರುವುದು ಒಂದು ಗ್ರಂಥ, ಒಬ್ಬ ಬೋಧಕನಾದರೆ ಸೂರ್ಯನು ಎಲ್ಲಿಗೆ ಹೋಗಬೇಕು? ಸೂರ್ಯನನ್ನು ಆದಿಗುರುವೆಂದು ಪ್ರಜೆಗಳು ಮುಗಿಯುತ್ತಿರುವಾಗ ಅತನು ಗುರುವಾಗಿ ಲೆಕ್ಕಿಸಲ್ಪಡುತ್ತಾನೆ ಅಲ್ಲವೆ! ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ.

ಇಲ್ಲಿ ಒಂದು ಸೂತ್ರವನ್ನು ಉಪಯೋಗಿಸಿ ಗುರುವನ್ನು ಗುರುತಿಸ ಬಹುದು. ಹಾಗೆಯೇ ಸೂರ್ಯನು ಗುರುವೋ, ಅಲ್ಲವೋ ಸಹ ಲೆಕ್ಕಿಸಬಹುದು. ಸೂರ್ಯನು ಪ್ರಜೆಗಳಿಗೆ ಜ್ಞಾನ ತಿಳಿಸಿದ ಮೊದಲ ಗುರುವೆಂದು ಆದಿನ

ಪ್ರಜೆಗಳು ಭಾವಿಸಿದ್ದಾರೆ. ಆದರೆ ಪ್ರಜೆಗಳ ಭಾವ ಸರಿಯಾದುದೆ ಎಂದು ಹೇಳಲಾರೆವು ಅಲ್ಲವೆ! ಏಕೆಂದರೆ ಗುರುವನ್ನು ಗುರುತಿಸುವುದು ಬಹಳ ಕಷ್ಟ. ಆದ್ದರಿಂದ ಆಗಿನ ಪ್ರಜೆಗಳ ಭಾವನೆ ತಪ್ಪಾಗಬಹುದು, ಸರಿಯಾಗಬಹುದು. ಆದ್ದರಿಂದ ನಾವು ಸೂರ್ಯನು ಗುರುವಾ! ಅಲ್ಲವಾ! ಎಂದು ವಿಶಧೀಕರಿಸಿ ನೋಡಿದರೆ, ಸೂರ್ಯನು ತಾನು ಕೇಳಿದ ಬೋಧನೆಯನ್ನು ಹೇಳಿದ್ದಾನಾಗಲಿ, ತಾನು ಸ್ವತಃವಾಗಿ ಜ್ಞಾನವನ್ನು ಹೇಳಲಿಲ್ಲ ತಾನೆ! ಇತರರ ಮೂಲಕ ಕೇಳಿ ತಿಳಿದುಕೊಂಡ ಜ್ಞಾನವನ್ನು ಪುನಃ ಹೇಳಿದವನು ಬೋಧಕನಾಗಿ ಲೆಕ್ಕಿಸಲ್ಪಡುತ್ತದೆ. ಆದ್ದರಿಂದ ಭೂಮಿಮೇಲೆ ಎಲ್ಲರಿಗಿಂತ ಮೊದಲು ಜ್ಞಾನವನ್ನು ಹೇಳಿದರೂ, ಸೂರ್ಯನನ್ನು ಗುರು ಎನ್ನುವುದಕ್ಕೆ ಸಾಧ್ಯವಿಲ್ಲ. ಪದ್ಧತಿ ಪ್ರಕಾರ ಸೂರ್ಯನನ್ನು ಬೋಧಕನು ಎಂದು ಹೇಳಬಹುದಾಗಲಿ, ಗುರುವೆಂದು ಹೇಳಬಾರದು. ಆದ್ದರಿಂದ ನಮಗೆ ಇನ್ನೂ ಇಬ್ಬರು ಗುರುಗಳು ತಿಳಿಯಬೇಕಾಗಿದೆಯೆಂದು ಹೇಳಿ ಕೊಂಡಿದ್ದೇವೆ.

ಸೂರ್ಯನು ಭೂಮಿಮೇಲೆ ಜ್ಞಾನವನ್ನು ಹೇಳಿದಾಗ ಪ್ರಜೆಗಳು ಜ್ಞಾನವನ್ನು ತಿಳಿದುಕೊಂಡಿದ್ದಾರೆ. ಕೃತಯುಗದಲ್ಲಿಯೇ ಭಾರತದೇಶದಲ್ಲಿನ ಪ್ರಜೆಗಳು ಪೂರ್ತಿ ದೈವಜ್ಞಾನ ಇರುವವರೆಂದು, ದೈವಶಕ್ತಿ ಇರುವವರೆಂದು ಹೆಸರುಹೊಂದಿದ್ದಾರೆ. ಆ ಕಾಲದಲ್ಲಿ ಭಾರತದೇಶದಲ್ಲಿ ಎಲ್ಲರೂ ಜ್ಞಾನಿಗಳೇ ಇರುವುದರಿಂದ ಆಗ ಭಾರತ ದೇಶವನ್ನು ಇಂದೂದೇಶ ಎಂದು ಇತರ ದೇಶಸ್ಥರು ಕರೆಯುತ್ತಿದ್ದರು. ಆದರೂ ಕಾಲಕ್ರಮೇಣ ಅಜ್ಞಾನ ಬೆಳೆಯುತ್ತಾ ಹೋಗಿ, ಜ್ಞಾನ ಕಡಿಮೆಯಾಗುತ್ತಾ ಬಂದು, ದ್ವಾಪರಯುಗ ಕೊನೆಯಲ್ಲಿ ಆದಿಯಲ್ಲಿ ಸೂರ್ಯನು ಹೇಳಿದ ಜ್ಞಾನವೆಲ್ಲವನ್ನು ತಿಳಿಯದಹಾಗೆ ಹೋಗಿದ್ದಾರೆ. ಜ್ಞಾನಿಗಳಾಗಿರುವವರು ಮರಣಿಸಿದಂತೆಲ್ಲಾ, ಅಜ್ಞಾನಿಗಳು ಹುಟ್ಟಿದಂತೆಲ್ಲಾ, ಬದಲಾವಣೆ ಆಗುತ್ತಾಬಂದು ಕೊನೆಗೆ ಪೂರ್ತಿ ಜ್ಞಾನ ತಿಳಿಯದ ಸ್ಥಿತಿಗೆ ಮನುಷ್ಯ ಸೇರಿಕೊಂಡಿದ್ದಾನೆ. ಅಂತಹ ಪರಿಸ್ಥಿತಿಯಲ್ಲಿ ದೇವರು ತನ್ನ ಮೂರನೆಯ ವಿಧಾನದ ಪ್ರಕಾರ ಭೂಮಿಮೇಲೆ ಮನುಷ್ಯರಿಗೆ ಪುನಃ ತನ್ನ ಜ್ಞಾನವನ್ನು ತಿಳಿಸಿದ್ದಾನೆ. ಮೂರನೆಯ ವಿಧಾನದ ಪ್ರಕಾರ ದೇವರು ತನ್ನ ದೂತನನ್ನು

ಕಳಿಸಿ ಪ್ರಜೆಗಳಿಗೆ ಜ್ಞಾನವನ್ನು ತಿಳಿಸುವುದು ಮಾಡಬೇಕು. ಇಲ್ಲಿ ಮತ್ತೆ ಕೆಲವರಿಗೆ ಪ್ರಶ್ನೆ ಬಂದು ನನ್ನನ್ನು ಈ ವಿಧವಾಗಿ ಕೇಳಬಹುದು. **"ನೀವು ಜಿಬ್ರಯೇಲ್‌ನನ್ನು ಕುರಿತು ಹೇಳಿದಾಗ, ಜಿಬ್ರಯೇಲ್ ತಾನು ತಿಳಿದುಕೊಂಡ ಜ್ಞಾನವನ್ನು ಪ್ರವಕ್ತರಿಗೆ ಹೇಳಿದ್ದಾನೆಂದು ಹೇಳಿದ್ದೀರ. ಖುರ್‌ಆನ್ ಗ್ರಂಥದಲ್ಲಿ ದೇವರು ಜಿಬ್ರಯೇಲ್ ಎಂಬ ದೂತನನ್ನು ಕಳಿಸಿ ಪ್ರವಕ್ತರಿಗೆ ಜ್ಞಾನವನ್ನು ತಿಳಿಸಿದ್ದಾನೆ ಎಂದು ಬರೆದಿದ್ದೀರ. ಎಲ್ಲಿ ಜಿಬ್ರಯೇಲ್ ಮಾತು ಬಂದರೂ ಅಲ್ಲಿ ಜಿಬ್ರಯೇಲ್ ದೂತ ಎಂದು ಹೇಳುವುದು ನಡೆದಿದೆ. ಜಿಬ್ರಯೇಲ್‌ನನ್ನು ದೇವರ ದೂತನಾಗಿ ಬಹಳಜನ ಹೇಳುವುದು ಕೇಳಿದ್ದೇವೆ. ನೀವು ಬರೆದಾಗ ಜಿಬ್ರಯೇಲ್ ಸೂರ್ಯನಹಾಗೆ ಒಂದು ಗ್ರಹ ಎಂದು ಹೇಳಿದ್ದೀರಾ. ನೀವು ದೂತಯೆಂದು ಹೇಳದಿದ್ದರೂ ಆತನು ದೇವರ ದೂತನೇಯೆಂದು ನಾವು ನಂಬುತ್ತಿದ್ದೇವೆ. ಇದಕ್ಕೆ ನೀವೇನೆನ್ನುತ್ತೀರಾ?"** ಎಂದು ಪ್ರಶ್ನಿಸಬಹುದು.

ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ. ದೇವರು ತನ್ನ ದೂತನನ್ನು ಕಳಿಸಿ ಜ್ಞಾನವನ್ನು ತಿಳಿಸುವುದು ಮೂರನೇ ವಿಧಾನವಾಗುತ್ತದೆ. ಜಿಬ್ರಯೇಲ್ ಗ್ರಹ ದೇವರ ಎರಡನೇ ವಿಧಾನದ ಪ್ರಕಾರ ತೆರೆಹಿಂಬದಿಯಿದ್ದು ಮಾತನಾಡಿದವನು ಮಾತ್ರವೇ. ಜಿಬ್ರಯೇಲ್ ಗ್ರಹ ದೇವರು ಹೇಳಿದ ಎರಡನೇ ವಿಧಾನದೊಳಗೆ ಬರುತ್ತಾನೆ. ಒಂದುವೇಳೆ ಇದನ್ನು ತಪ್ಪಾಗಿ ಅರ್ಥೈಸಿಕೊಳ್ಳುವುದಕ್ಕೆ ಅವಕಾಶ ಇದೆಯೆಂದು, ಜಿಬ್ರಯೇಲ್‌ನನ್ನು ದೂತನಾಗಿ ಹೇಳದೆ ನಾವು ಗ್ರಹವಾಗಿಯೇ ಹೇಳಿಕೊಳ್ಳುತ್ತಾ ಬಂದಿದ್ದೇವೆ. ವಾಸ್ತವವಾಗಿ ಜಿಬ್ರಯೇಲ್ ಖಗೋಳದಲ್ಲಿನ ಒಂದು ಗ್ರಹ. ಆತನು ಪ್ರತ್ಯೇಕವಾಗಿ ದೇವರ ಹತ್ತಿರದಿಂದ ಕಳಿಸಲ್ಪಟ್ಟವನು ಅಲ್ಲ. ಜಿಬ್ರಯೇಲ್ ಸೂರ್ಯ ಗ್ರಹದಂತಹ ಒಂದು ಗ್ರಹ ಮಾತ್ರವೇ. ದೇವರ ದೂತನಲ್ಲ. ಇಲ್ಲಿ ಕೂಡ ಕೆಲವರು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! "ಸೂರ್ಯನು ಕೂಡ ಜಿಬ್ರಯೇಲ್‌ನಂತೆ ಒಂದು ಗ್ರಹವೇ ಅಲ್ಲವೆ! ಜಿಬ್ರಯೇಲ್ ಗ್ರಹ ಜ್ಞಾನವನ್ನು ಪ್ರವಕ್ತರಿಗೆ ಹೇಳಿದಾಗ ತೆರೆಹಿಂಬದಿಯಿಂದ ಹೇಳಿದ ವಿಧಾನ ನೆರವೇರಿದೆಯೆಂದು

ಹೇಳಿದ್ದಾರೆ. ಅದಕ್ಕುಮೊದಲು ಕೃತಯುಗದಲ್ಲಿಯೇ ಸೂರ್ಯನು ತಾನು ಗ್ರಹಿಸಿಕೊಂಡ ಜ್ಞಾನವನ್ನು ಭೂಮಿಮೇಲಕ್ಕೆ ಬಂದು, ಜಿಬ್ರಯೇಲ್ ಪ್ರವಕ್ತರಿಗೆ ಹೇಳಿದಹಾಗೆ, ಮನುವಿಗು ಹೇಳಿಹೋಗಿದ್ದಾನೆ ಅಲ್ಲವೆ! ಸೂರ್ಯನು ಗ್ರಹವೇ ಮತ್ತು ಜಿಬ್ರಯೇಲ್ ಗ್ರಹವೇ ಆದಾಗ ಗ್ರಹವಾದ ಜಿಬ್ರಯೇಲ್ ಪ್ರವಕ್ತರಿಗೆ ಹೇಳಿದಾಗ ತೆರೆಹಿಂಬದಿಯಿಂದ ಹೇಳಿದಂತಾದರೆ, ಅದೇ ವಿಧವಾಗಿ ಸೂರ್ಯನು ಮನುವಿಗೆ ಹೇಳಿದಾಗ ಸಹ ತೆರೆಹಿಂಬದಿಯಿಂದಲೇ ಹೇಳಿದಂತಾಗುತ್ತದೆ ಅಲ್ಲವೆ! ಜಿಬ್ರಯೇಲ್ ಕಲಿಯುಗದಲ್ಲಿ ಹೇಳಿದ್ದಾನೆ, ಸೂರ್ಯನು ಕೃತಯುಗದಲ್ಲಿಯೇ ಹೇಳಿದ್ದಾನೆ. ಅಂತಹದರಲ್ಲಿ ಮೊದಲು ಹೇಳಿದ ಸೂರ್ಯನನ್ನು ತೆರೆಹಿಂಬದಿಯಿಂದ ಹೇಳಿದ್ದಾನೆಂದುಕೊಳ್ಳದೆ, ಹಿಂದೆ ಹೇಳಿದ ಜಿಬ್ರಯೇಲ್‌ನನ್ನು ಮಾತ್ರ ತೆರೆಹಿಂಬದಿಯಿಂದ ಪ್ರವಕ್ತರಿಗೆ ಹೇಳಿದ್ದಾನೆಂದು ಏಕೆ ಅನ್ನುತ್ತಿದ್ದೀರಾ? ದೇವರು ಹೇಳಿದ ಎರಡನೆಯ ವಿಧಾನ ತೆರೆಹಿಂಬದಿಯಿಂದ ಜ್ಞಾನ ಹೇಳುವುದು ಸೂರ್ಯಗ್ರಹದ ಹತ್ತಿರವೇ ನಡೆದುಹೋಗಿದೆ ಅಲ್ಲವೆ! ಅಂತಹದರಲ್ಲಿ ಸೂರ್ಯನ ಹತ್ತಿರ ಹೇಳದಹಾಗೆ ಜಿಬ್ರಯೇಲ್ ಹತ್ತಿರ ನಡೆದಿದೆಯೆಂದು ನೀವು ಹೇಳುತ್ತಿದ್ದೀರಾ. ಅದರಿಂದ ನಮಗೆ ಸೂರ್ಯನು ಹೇಳಿರುವುದು ತೆರೆಹಿಂಬದಿಯಿಂದ ಹೇಳಿದಹಾಗಾ! ಇಲ್ಲವೆ ಜಿಬ್ರಯೇಲ್ ಹೇಳಿರುವುದು ತೆರೆಹಿಂಬದಿಯಿಂದ ಹೇಳಿದಹಾಗಾ! ಎಂದು ಪ್ರಶ್ನೆ ಬಂದಿದೆ. ಇದಕ್ಕೆ ನೀವೇನು ಹೇಳುತ್ತೀರಾ! ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ ನೋಡಿರಿ.

ಸೂರ್ಯಗ್ರಹ ಕೃತಯುಗದಲ್ಲಿ ಮನುವು ಎಂಬ ವ್ಯಕ್ತಿಗೆ ಹೇಳಿದರೂ, ಅದು ತೆರೆಮರೆಯಲ್ಲಿ ಹೇಳಿದಹಾಗೆ ಪರಿಗಣಿಸಲ್ಪಡುವುದಿಲ್ಲ. ಜಿಬ್ರಯೇಲ್ ಗ್ರಹ ಕಲಿಯುಗದಲ್ಲಿ ಪ್ರವಕ್ತಗೆ ಹೇಳಿದಾಗ ಅದು ಮಾತ್ರ ಮೊದಲಬಾರಿಗೆ ತೆರೆಮರೆಯಿಂದ ಹೇಳಿದಂತಾಗಿದೆ. ಆಗ ದೇವರು ಹೇಳಿದ ಎರಡನೆಯ ವಿಧಾನ ನೆರವೇರಿದೆ. ಸೂರ್ಯನು ಗ್ರಹವೇ, ಜಿಬ್ರಯೇಲ್ ಗ್ರಹವೇ ಆದಾಗ ಸೂರ್ಯನು ಹೇಳಿದಾಗ ತೆರೆಮರೆಯಲ್ಲಿ ಅಲ್ಲದಿರುವುದು, ಜಿಬ್ರಯೇಲ್ ಹೇಳಿದಾಗ ಮಾತ್ರವೆ

ತೆರೆಹಿಂಬದಿಯಿಂದ ಹೇಳಿದಹಾಗೆ ಏಕಾಗಿದೆಯೆಂದು ಪ್ರಶ್ನಿಸುವುದು ಸಮಂಜಸವೇ!. ಆದರೆ ಸೂರ್ಯನು, ಜಿಬ್ರಯೇಲ್ ಇಬ್ಬರೂ ಗ್ರಹಗಳೇ ಆದರೂ ಸೂರ್ಯನು ಹೇಳಿರುವುದಕ್ಕು, ಜಿಬ್ರಯೇಲ್ ಹೇಳಿರುವುದಕ್ಕು ಬಹಳ ವ್ಯತ್ಯಾಸವಿದೆ. ಜಿಬ್ರಯೇಲ್ ಗ್ರಹ ಪ್ರವಕ್ತರಿಗೆ ಸ್ವಲ್ಪವೂ ಕಾಣಿಸಿದಹಾಗೆ ಹೇಳುವುದು ನಡೆದಿದೆ. ಕೇಳುವ ಮುಹಮ್ಮದ್ ಪ್ರವಕ್ತರಿಗೆ ಹೇಳುವ ವ್ಯಕ್ತಿ (ಜಿಬ್ರಯೇಲ್) ಸ್ವಲ್ಪವೂ ಕಾಣಿಸಲಿಲ್ಲ. ಜಿಬ್ರಯೇಲ್ ಹೇಳುವಮಾತು ಮಾತ್ರ ಪ್ರವಕ್ತರಿಗೆ ಕೇಳಿಸುತ್ತಿತ್ತು. ಅಂತಹದರಲ್ಲಿ ಜಿಬ್ರಯೇಲ್ ತೆರೆಹಿಂದಿದ್ದು ಕಾಣಿಸದೆ ಮಾತನಾಡಿ ಜ್ಞಾನವನ್ನು ಹೇಳಿದಂತಾಗಿದೆ. ಇದನ್ನು ತೆರೆಹಿಂದಿದ್ದು ಹೇಳುವುದೆಂದರೆ ಯಾರೂ ಅಲ್ಲಗಳೆಯರು. ಜಿಬ್ರಯೇಲ್‌ಗು ಮುಹಮ್ಮದ್ ಪ್ರವಕ್ತರಿಗು ಮಧ್ಯೆ ಸಂಭಾಷಣೆ ಮಾತ್ರ ನಡೆದಿದೆ ಆದರೆ, ಜಿಬ್ರಯೇಲ್ ಯಾರೋ! ಹೇಗಿರುತ್ತಾನೋ! ಪ್ರವಕ್ತರಿಗೆ ತಿಳಿದಿಲ್ಲ. ಪ್ರವಕ್ತ 23ವರ್ಷಗಳು ಜಿಬ್ರಯೇಲ್‌ನ ಜ್ಞಾನ ಕೇಳಿದರೂ ಯಾವತ್ತೂ ಜಿಬ್ರಯೇಲ್‌ನನ್ನು ನೋಡಲಿಲ್ಲ.

ಜಿಬ್ರಯೇಲ್ ಖಗೋಳದಲ್ಲಿ ಒಂದು ಗ್ರಹವಾದ್ದರಿಂದ ಆತನಿಗೆ ಮಾನವ ಶರೀರವು ಇಲ್ಲ. ಆತನ ಶರೀರವು ಒಂದು ಗೋಳಾಕೃತಿ ಇರುವ ಗ್ರಹವಾಗಿ ಇರುವುದು. ಜಿಬ್ರಯೇಲ್ ದೇವರ ಪಾಲನೆಯಲ್ಲಿನ ಒಬ್ಬ ಸೇವಕನು. ಆದ್ದರಿಂದ ಆತನಿಗಿರುವ ಪ್ರತ್ಯೇಕತೆಯಿಂದ ಸ್ಥೂಲ ಶರೀರವನ್ನು ಬಿಟ್ಟು ಸೂಕ್ಷ್ಮಶರೀರದಿಂದ ಎಲ್ಲಿಗಾದರೂ ಹೋಗಿಬರಬಹುದು. ಅಂತಹ ಪ್ರತ್ಯೇಕತೆ ಎಲ್ಲಾ ಗ್ರಹಗಳಿಗೂ ಇದೆ. ಗ್ರಹಗಳಿಗೇ ಅಲ್ಲ ಗುಡಿಯಲ್ಲಿನ ವಿಗ್ರಹಗಳಿಗು ಸಹ ಅಂತಹ ಅನುಕೂಲವು ಇದೆ. ಆದುದರಿಂದ ಗ್ರಹಗಳಾಗಲಿ, ವಿಗ್ರಹಗಳಾಗಲಿ ತಮ್ಮ ಸ್ಥೂಲಶರೀರವನ್ನು ಬಿಟ್ಟು ಹೊರಗೆ ಎಷ್ಟು ದೂರವಾದರೂ ಹೋಗಿಬರಬಲ್ಲವು. ಅದೇ ವಿಧಾನವನ್ನು ಜಿಬ್ರಯೇಲ್ ಉಪಯೋಗಿಸಿಕೊಂಡು ತಿಂಗಳಿಗೊಂದುಬಾರಿ, ಎರಡು ಮೂರು ತಿಂಗಳಿಗೊಂದುಬಾರಿ, ಹತ್ತುದಿನಗಳಿಗೊಂದು ಬಾರಿ ಹೀರಾ ಬೆಟ್ಟದ ಗುಹೆಗಳೊಳಗೆ ಬಂದು ಮುಹಮ್ಮದ್ ಪ್ರವಕ್ತರಿಗೆ ಜ್ಞಾನವನ್ನು ಹೇಳಿ ಹೋಗುತ್ತಿದ್ದನು. ಒಂದುಬಾರಿ ಕೆಳಕ್ಕೆ ಬಂದಾಗ ಎರಡು ಮೂರು ದಿನಗಳಾದರೂ

ಕೆಳಗೆ ಇದ್ದು ಪ್ರವಕ್ತರಿಗೆ ಜ್ಞಾನ ಹೇಳುತ್ತಿದ್ದನು. ಪ್ರವಕ್ತರಿಗೆ ಓದುಬಾರದಿರುವುದರಿಂದ ಹೇಳಿರುವುದು ಬರೆದುಕೊಳ್ಳುವುದಕ್ಕೆ ಸಾಧ್ಯವಿಲ್ಲ. ಹೇಳಿರುವುದು ಕೇಳಿ ಜ್ಞಾಪಕ ಇಟ್ಟುಕೊಳ್ಳಬೇಕಾಗಿದ್ದೇ. ಹೆಚ್ಚಿನ ವಿಷಯಗಳು ಹೇಳಿದರೆ ಪ್ರವಕ್ತರಿಗೆ ಜ್ಞಾಪಕ ಇಟ್ಟುಕೊಳ್ಳುವುದು ಕಷ್ಟವಾಗುತ್ತದೆಂದು, ಜಿಬ್ರಯೇಲ್ ಪ್ರವಕ್ತರಿಗೆ ಹೇಳಿದಾಗೆಲ್ಲಾ ಎರಡು ಮೂರು ವಿಷಯಗಳಿಗಿಂತ ಹೆಚ್ಚಾಗಿ ಹೇಳುತ್ತಿರಲಿಲ್ಲ. ಜಿಬ್ರಯೇಲ್ ಭೂಮಿಮೇಲಕ್ಕೆ ಬಂದರೆ ವರಸೆಯಾಗಿ ಹತ್ತು ಹದಿನೈದು ದಿನಗಳು ಭೂಮಿಮೇಲೆಯೇ ಇದ್ದು ಪ್ರವಕ್ತರೊಂದಿಗೆ ಪ್ರತಿದಿನವೂ ಮಾತನಾಡಿದ ಸಂದರ್ಭಗಳು ಇವೆ. ಹಾಗೆಯೇ ಒಂದೊಂದುಬಾರಿ ಮೂರು, ನಾಲ್ಕು ತಿಂಗಳು ಬಾರದ ಸಂದರ್ಭಗಳು ಸಹ ಇವೆ.

ಇಲ್ಲಿ ಕೆಲವರು ತಿಳುವಳಿಕೆಯುಳ್ಳವರು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶ ಇದೆ. ಅದೇನೆಂದರೆ! ಖುರ್‌ಆನ್ ಗ್ರಂಥದಲ್ಲಿ ಒಟ್ಟು 6236 ವಾಕ್ಯಗಳು ಇವೆ ಅಲ್ಲವೆ! ಎಲ್ಲಾ ವಾಕ್ಯಗಳು ಹೇಳುವುದಕ್ಕೆ ಎಷ್ಟುಬಾರಿ ಜಿಬ್ರಯೇಲ್ ಕೆಳಗೆ ಬರಬೇಕಾಗಿರುತ್ತದೆ? ನೀವು ಹೇಳಿದಹಾಗೆ ಎರಡು ಮೂರು ತಿಂಗಳಿಗೊಂದು ಬಾರಿ ಕೆಳಗೆ ಬಂದಿರುವ ಸಂದರ್ಭಗಳು ಸಹ ಇವೆಯೆಂದು ಹೇಳಿದ್ದೀರ ತಾನೆ! ಆ ವಿಧವಾಗಿ ಬಂದಿದ್ದರೆ 6236 ವಾಕ್ಯಗಳು 23 ವರ್ಷಗಳಲ್ಲಿ ಹೇಳುವುದಕ್ಕೆ ಸಾಧ್ಯವಾಗುತ್ತದಾ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿ ಇದೆ. ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರಿಗೆ ಮಾತ್ರವೇ ಜ್ಞಾನವನ್ನು ಹೇಳಿದ್ದಾನೆ. ಮುಹಮ್ಮದ್ ಪ್ರವಕ್ತರವರು ಜಿಬ್ರಯೇಲ್ ಹೇಳಿದ ಎರಡು ಇಲ್ಲವೆ ಮೂರು ವಾಕ್ಯಗಳನ್ನು ಕೇಳಿ ಜ್ಞಾಪಕ ಇಟ್ಟುಕೊಂಡು, ಸಮೀಪದಲ್ಲಿರುವ ಮಕ್ಕಾ ನಗರದೊಳಗೆ ಹೋಗಿ, ತನ್ನ ಹತ್ತಿರಕ್ಕೆ ಬರುವ ಸಹಚರರಾದ ಕೆಲವರಿಗೆ ಆ ವಾಕ್ಯಗಳನ್ನು ಹೇಳುತ್ತಿದ್ದನು. ಅಲ್ಲಿಗೆ ಬಂದಿರುವ ಪ್ರವಕ್ತ ಅನುಚರರು ಅಥವಾ ಸಹಚರರಲ್ಲಿ ಒಬ್ಬರು ಅಥವಾ ಇಬ್ಬರಿಗೆ ಓದು ಬರುತ್ತಿತ್ತು. ಉಳಿದವರು ಪ್ರವಕ್ತನಂತೆ ಓದುಬಾರದವರೆ ಇರುತ್ತಿದ್ದರು. ಓದುಬಾರದವರು ಪ್ರವಕ್ತ ಹೇಳಿದ ವಾಕ್ಯಗಳನ್ನು ಕೇಳಿ ಹೋಗುತ್ತಿದ್ದರು. ಓದು ಬಂದವರು ಅವುಗಳನ್ನು

ಬರೆದುಕೊಂಡು ಹೋಗುತ್ತಿದ್ದರು. ಜಿಬ್ರಯೇಲ್ ಹೇಳಿರುವುದು ಪ್ರವಕ್ತರಿಗೆ ಅರ್ಥವಾಗಿರಬಹುದು ಆದರೆ, ಪ್ರವಕ್ತ ಹೇಳಿರುವುದು ಉಳಿದ ಮನುಷ್ಯರಿಗೆ ಪೂರ್ತಿಯಾಗಿ ಅರ್ಥವಾಗಿರುತ್ತದೆಂದು ಹೇಳಲಾರೆವು. ಪ್ರವಕ್ತ ಹೇಳಿದ ವಿಷಯ ಕೆಲವರಿಗೆ 90% ರಷ್ಟು ಅರ್ಥವಾಗಿದ್ದರೆ, ಕೆಲವರಿಗೆ 60 ಅಥವಾ 70 ರಷ್ಟು ಅರ್ಥವಾಗಿರುತ್ತದೆ. ಮತ್ತೆ ಕೆಲವರಿಗೆ ಶೇಕಡ 10 ಅಥವಾ 20 ರಷ್ಟು ಸಹ ಅರ್ಥವಾಗಿರುತ್ತದೆಂದು ಹೇಳಲಾರೆವು. ಈದಿನ ನಾವು ಒಂದು ವಿಷಯವನ್ನು ಹೇಳಿದರೆ ಕೇಳಿದವನಿಗೆ ನಾವು ಹೇಳಿರುವುದು ಹೇಳಿದಂತಲ್ಲದೆ ಸ್ವಲ್ಪವಾದರೂ ಬೇರೆಯಾಗಿ ಅರ್ಥವಾಗಿರುತ್ತದೆ. ಅದೇ ವಿಧವಾಗಿ ಪ್ರವಕ್ತ ಹೇಳಿದ ವಿಷಯಗಳು ಉಳಿದವರಿಗೆ ನೂರಕ್ಕೆ ನೂರಪಾಲು ಅರ್ಥವಾಗಿರುತ್ತದೆಂದು ಹೇಳಲಾರೆವು. 23 ವರ್ಷಗಳು ಜಿಬ್ರಯೇಲ್‌ನಿಂದ ಕೇಳಿದ ಜ್ಞಾನವನ್ನು ಖುರ್‌ಆನ್ ರೂಪವಾಗಿ ಪ್ರವಕ್ತರು ಬರೆಯಲಿಲ್ಲ. ಆತನು ಹೇಳಿದಾಗ ಕೇಳಿದವರು, ಬರೆದುಕೊಂಡವರು ಎಲ್ಲರೂ ಸೇರಿ ಖುರ್‌ಆನ್ ಗ್ರಂಥವನ್ನು ತಯಾರು ಮಾಡಿದ್ದಾರೆ. ಹಾಗೆ ಬರೆದ ಗ್ರಂಥದಲ್ಲಿ ಜಿಬ್ರಯೇಲ್‌ನಿಂದ ಮುಹಮ್ಮದ್ ಪ್ರವಕ್ತರಿಗೆ, ಪ್ರವಕ್ತರಿಂದ ಆತನ ಸಹಚರರಿಗೂ ವಿಷಯ ಸೇರಿಸಲಾಗಿದೆ. ಮೂವರ ಮೂಲಕ ಬದಲಾಗಿ ಬಂದ ವಿಷಯವು ಇರುವುದು ಇದ್ದಂತೆ ಇರುತ್ತದೆಂದು ನನಗೆ ನಂಬಿಕೆಯಿಲ್ಲ. ಇಲ್ಲಿ ನನ್ನ ಉದ್ದೇಶವನ್ನು ಮಾತ್ರ ಬರೆಯುತ್ತಿದ್ದೇನೆ. ನಾನು ಅಂದು ಕೊಂಡಿರುವುದು ಸತ್ಯ ಆಗಬಹುದು, ಅಸತ್ಯವೂ ಆಗಬಹುದು. ಆದ್ದರಿಂದ ಈ ಒಂದು ವಿಷಯದಲ್ಲಿ ನನ್ನ ಮಾತನ್ನೇ ನಂಬಬೇಡವೆಂದು ನಿಮ್ಮೊಂದರ ಬುದ್ಧಿಯನ್ನು ಉಪಯೋಗಿಸಿಕೊಂಡು ನೋಡಿಕೊಳ್ಳಿರೆಂದು ಹೇಳುತ್ತಿದ್ದೇನೆ. ನನಗೆ ತೋಚಿರುವುದು ನಾನು ಬರೆಯದೆ ತಪ್ಪುವುದಿಲ್ಲ ಆದ್ದರಿಂದ ನನ್ನ ಉದ್ದೇಶವನ್ನು ನಾನು ಬರೆಯುತ್ತಿದ್ದೇನೆ. ಪ್ರವಕ್ತರು ಹೇಳಿರುವುದು ಹೇಳಿದಂತೆ, ಇರುವುದು ಇದ್ದಂತೆ ಖುರ್‌ಆನ್ ಗ್ರಂಥದಲ್ಲಿ ಇರುತ್ತದೆಂದು ನಾನು ನಂಬುತ್ತಿಲ್ಲ. ಜಿಬ್ರಯೇಲ್ ಹೇಳಿರುವುದಕ್ಕು, ಪ್ರವಕ್ತ ಅನುಚರರು ಬರೆದಿರುವುದಕ್ಕು, ಸ್ವಲ್ಪವಾದರೂ ಬದಲಾಗಿರಬಹುದು ಅಥವಾ ಬದಲಾಗದೆ ಇರಬಹುದು. ಜಿಬ್ರಯೇಲ್ ಹೇಳಿದ ವಾಕ್ಯಗಳಿಗಿಂತ ಹೆಚ್ಚಾಗಿರಬಹುದು ಅಥವಾ ಕಡಿಮೆ

ಇರಬಹುದು. ಆದ್ದರಿಂದ ಸ್ವಲ್ಪವಾದರೂ ವ್ಯತ್ಯಾಸ ಇರುತ್ತದೆಂದು ನಾನು ಅಂದುಕೊಳ್ಳುತ್ತಿದ್ದೇನೆ.

ಖುರ್‌ಆನ್ ವಿಷಯದಲ್ಲಿಯೇ ನಾನು ನನ್ನ ಅಭಿಪ್ರಾಯವನ್ನು ಹೇಳುತ್ತಿಲ್ಲ. ಹಿಂದೂಗಳ ಮೂಲಗ್ರಂಥವಾದ ಭಗವದ್ಗೀತೆಯಲ್ಲಿ ಸಹ ಹಾಗೆಯೇ ನಡೆದಿರಬಹುದೆಂದುಕೊಳ್ಳುತ್ತೇನೆ. ಭಗವದ್ಗೀತೆಯಲ್ಲಿ ದೇವರು ಹೇಳದ ವಿಷಯಗಳು ಇರುವುದು ನಾವು ಗ್ರಹಿಸಿ, ನಮ್ಮ ರಚನೆಯಲ್ಲಿ ಅವುಗಳನ್ನು ತೆಗೆದುಹಾಕಿ ಬರೆದಿದ್ದೇವೆ. ದೇವರು ಹೇಳದ ವಿಷಯಗಳನ್ನು ಭಗವದ್ಗೀತೆಯಲ್ಲಿ ನಾವು ಗುರುತಿಸಿದರೂ, ದೇವರು ಹೇಳಿದ ವಿಷಯಗಳು ಎಷ್ಟು ಇಲ್ಲದಹಾಗೆ ಹೋಗಿವೆಯೊ ನಮಗೆ ತಿಳಿಯುವುದಕ್ಕೆ ಅವಕಾಶವೇ ಇಲ್ಲ. ಪ್ರಥಮ ದೈವಗ್ರಂಥದಲ್ಲಿನ ವಿಷಯಗಳನ್ನು ಕೃಷ್ಣನು ಅರ್ಜುನನಿಗೆ ಹೇಳಿದಾಗ, ಅರ್ಜುನನು ವ್ಯಾಸನಿಗೆ ಹೇಳಿದಾಗ ಮೂರನೆಯ ವ್ಯಕ್ತಿಯಾದ ವ್ಯಾಸನು ಭಗವದ್ಗೀತೆಯನ್ನು ಬರೆದಿದ್ದಾನೆ. ಹಾಗೆ ಬರೆದಾಗ ಕೃಷ್ಣನು ಹೇಳಿದ ವಿಷಯಗಳನ್ನು ಖಚಿತವಾಗಿ ಅರ್ಜುನನು ವ್ಯಾಸನಿಗೆ ಹೇಳಿದ್ದಾನೆಂಬ ನಂಬಿಕೆ ಇಲ್ಲ. ಅಂತಹದರಲ್ಲಿ ಭಗವದ್ಗೀತೆಯಲ್ಲಿ ಕಲ್ಪಿತಗಳು ಇರುವುದಿಲ್ಲವೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ನಾವು ಭಗವದ್ಗೀತೆಯನ್ನು ಅನುವಾದಿಸಿ ಬರೆದಾಗ ಎಷ್ಟೋ ಕಲ್ಪಿತ ಶ್ಲೋಕಗಳನ್ನು ನಾನು ಗುರುತಿಸಿ ಅವುಗಳಿಗೆ ಭಾವವನ್ನು ಬರೆಯದಹಾಗೆ ಬಿಟ್ಟಿದ್ದೇವೆ. ಭಗವದ್ಗೀತೆಯಲ್ಲಿ ಕೃಷ್ಣನು ಹೇಳಿದ ವಿಷಯಗಳು ಕೊನೆಗೆ ಎಷ್ಟು ಇಲ್ಲದಹಾಗೆ ಹೋಗಿವೆಯೋ ಹೇಳಲಾರೆವು ಆದರೇ, ಎಷ್ಟೋ ಕಲ್ಪಿತ ವಿಷಯಗಳು ಪ್ರತ್ಯಕ್ಷವಾಗಿ ಕಾಣಿಸಿವೆಯೆಂದು ಮಾತ್ರ ಹೇಳಬಲ್ಲೆವು.

ಭಗವದ್ಗೀತೆಯನ್ನು ಬರೆದವನು ಮೂರನೇ ವ್ಯಕ್ತಿ. ಹಾಗೆಯೇ ಖುರ್‌ಆನ್ ಗ್ರಂಥವನ್ನು ಬರೆದವರು ನಾಲ್ಕನೇ ವ್ಯಕ್ತಿಗಳೆಂದು ಹೇಳಬಹುದು. ಭಗವಂತನಾದ ಕೃಷ್ಣನು ಹೇಳಿದಾಗ ಎರಡನೆಯವನು ಅರ್ಜುನನು ಕೇಳಿದ್ದಾನೆ. ಅರ್ಜುನನು ಹೇಳಿದಾಗ ಮೂರನೆಯವನಾದ ವ್ಯಾಸನು ಬರೆದಿದ್ದಾನೆ. ಗೀತೆ ವಿಷಯ ಹಾಗೆ ಇರುವಾಗ, ಖುರ್‌ಆನ್ ವಿಷಯಕ್ಕೆ ಬಂದರೆ ವಾಣಿ

ಹೇಳಿರುವುದನ್ನು ಎರಡನೆಯವನಾದ ಸೂರ್ಯನು ಕೇಳಿದ್ದಾನೆ. ಸೂರ್ಯನು ಹೇಳಿದ ವಿಷಯವನ್ನು ಮೂರನೆಯವರಾದ ಜಿಬ್ರಯೇಲ್ ಕೇಳಿದ್ದಾನೆ. ಜಿಬ್ರಯೇಲ್ ಹೇಳಿದ ವಿಷಯವನ್ನು ನಾಲ್ಕನೆಯವನಾದ ಪ್ರವಕ್ತ ಕೇಳಿದ್ದಾನೆ. ಪ್ರವಕ್ತ ಹೇಳಿದಾಗ ಐದನೆಯವರಾದ ಆತನ ಅನುಚರರು ಕೇಳಿದ್ದಾರೆ. ಈ ವಿಧವಾಗಿ ಆದರೆ ಐದನೆಯವರಾದ ಪ್ರವಕ್ತ ಅನುಚರರು ಬರೆದಿರುವುದು ಖುರ್‌ಆನ್ ಗ್ರಂಥವಾಗಿದೆ. ಇಲ್ಲ ವಾಣಿ ಹೇಳಿದಾಗಲೇ ಸೂರ್ಯನೊಂದಿಗೆ ಜಿಬ್ರಯೇಲ್ ಸಹ ಕೇಳಿದ್ದಾನೆ ಅಂದರೆ ವರಸೆ ಕ್ರಮದಲ್ಲಿ ನಾಲ್ಕನೆಯವರು ಖುರ್‌ಆನ್‌ನನ್ನು ಬರೆದಂತಾಗುತ್ತದೆ. ಮೂರನೆಯವನಾದ ವ್ಯಾಸನು ಬರೆದ ಗೀತಾ ವಿಷಯದಲ್ಲಿ ದೇವರು ಹೇಳದ ಜ್ಞಾನ ಬರೆದಿರುವುದಲ್ಲದೆ, ಒಂದುಕಡೆ ಪೂರ್ವ ಎಂದು ಬರೆದ ವಿಷಯವನ್ನೇ ಮತ್ತೊಂದುಕಡೆ ಪಶ್ಚಿಮ ಎಂದು ಬರೆದಿರುವುದು ನಡೆದಿದೆ. ಹೀಗೆ ಪೂರ್ವ ಎಂದು ಒಂದುಕಡೆ, ಪಶ್ಚಿಮ ಎಂದು ಮತ್ತೊಂದುಕಡೆ, ಒಂದಕ್ಕೊಂದು ಪರಸ್ಪರ ವಿರುದ್ಧ ವಾಕ್ಯಗಳಿರುವುದರಿಂದ ಭಗವದ್ಗೀತೆಯಲ್ಲಿ ಕಲುಷಿತ ವಾಕ್ಯಗಳು ಸೇರಿವೆಯೆಂದು ಅರ್ಥವಾಗುತ್ತಿದೆ. ಹಾಗೆಯೇ ಖುರ್‌ಆನ್ ಗ್ರಂಥದಲ್ಲಿ ಸಹ ಕೆಲವುಕಡೆ ಪರಸ್ಪರ ವಿರುದ್ಧ ವಾಕ್ಯಗಳಿರುವುದನ್ನು ನೋಡಿ ಅವು ಮನುಷ್ಯರಿಗೆ ಅವಗಾಹನೆ ಲೋಪದಿಂದ ಬರೆದಿರುವ ವಾಕ್ಯಗಳೆಂದು ಅಂದುಕೊಂಡಿದ್ದೇವೆ. ಆದ್ದರಿಂದ ಖುರ್‌ಆನ್‌ನಲ್ಲಿ ಕೆಲವು ಮನುಷ್ಯರ ಭಾವನೆಗಳು ಬೆರೆತಿವೆಯೇನೊ! ಎಂದು ನಾನೆಂದುಕೊಳ್ಳುತ್ತೇನೆ. ಆದರೆ ನಾನು ಅಂದುಕೊಂಡಿರುವುದು ಸತ್ಯ ಎಂದು ಹೇಳಲಾರೆವು. ಅದು ನನ್ನ ಭಾವನೆ ಮಾತ್ರವೆ, ಅದು ಸತ್ಯವಾಗಬಹುದು, ಅಸತ್ಯವೂ ಆಗಬಹುದು. ಆದ್ದರಿಂದ ನಿಮ್ಮ ಬುದ್ಧಿಯನ್ನು ಉಪಯೋಗಿಸಿ ನೋಡಿರಿ. ನನ್ನ ಮಾತನ್ನು ನಂಬಬೇಡವೆಂದು ಹೇಳುತ್ತಿದ್ದೇನೆ.

ಇಲ್ಲಿ ಕೆಲವರು ನಿನಗೆ ಖುರ್‌ಆನ್ ಮೇಲೆ ಏಕೆ ನಿನಗೆ ಅಷ್ಟು ಅನುಮಾನ ಬಂದಿದೆ, ಅದರಲ್ಲಿ ಏನು ಲೋಪ ಕಾಣಿಸಿದೆಯೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ ನೋಡಿರಿ. **ಖುರ್‌ಆನ್ ಗ್ರಂಥದಲ್ಲಿ ಒಂದುಕಡೆ**

**ದೇವರು ತಾನು ಮಾಡಬೇಕಾಗಿರುವುದನ್ನು ಆಗಿಹೋಗಲಿ! ಎಂದರೆ ಆಗಿಹೋಗುತ್ತದೆ ಎಂದು ಬರೆದವರು** ಮತ್ತೊಂದುಕಡೆ ಮೊದಲು ಹೇಳಿದ ವಾಕ್ಯಕ್ಕೆ ವಿರುದ್ಧವಾಗಿ **ದೇವರು ಆರು ದಿನಗಳು ಶ್ರಮಿಸಿ ಸೃಷ್ಠಿ ಎಲ್ಲವನ್ನು ತಯಾರಿ ಮಾಡಿದ್ದಾನೆ, ನಂತರ ಏಳನೆಯದಿನ ತನ್ನ ಸಿಂಹಾಸನದಮೇಲೆ ಕುಳಿತು ಕೊಂಡಿದ್ದಾನೆಂದು ಹೇಳಿದ್ದಾರೆ.** ಆಗಿಹೋಗಲಿ ಎಂದರೆ ಆಗಿಹೋಗುತ್ತದೆ ದೇವರು ಏನು ಮಾಡುವುದಿಲ್ಲ ಎಂಬ ವಾಕ್ಯಕ್ಕೆ, ದೇವರು ಆರು ದಿನಗಳು ಶ್ರಮಿಸಿ ಸರ್ವವನ್ನು ಸೃಷ್ಠಿಸಿದ್ದಾನೆಂಬ ವಾಕ್ಯಕ್ಕೆ ಪೂರ್ತಿ ವಿರುದ್ಧವಾಗಿ ಕಾಣಿಸುತ್ತಿದೆ. ಇಂತಹ ವಾಕ್ಯಗಳೇ ಅಲ್ಲಲ್ಲಿ ಕಾಣಿಸುತ್ತಿವೆ. **ಒಂದುಕಡೆ ಅಲ್ಲಾ ಕಠಿಣವಾಗಿ ಶಿಕ್ಷಿಸುವವನು ಎಂದು ಹೇಳಿ, ಮತ್ತೊಂದುಕಡೆ ಅಲ್ಲಾ ಕ್ಷಮಿಸುವವನು, ಅಮಿತವಾದ ದಯಾಮಯನೆಂದು ಹೇಳುವುದರಿಂದ,** ಈ ಎರಡು ವಾಕ್ಯಗಳು ಒಂದಕ್ಕೆ ಮತ್ತೊಂದು ವಿರುದ್ಧವಾಗಿ ಕಾಣಿಸುತ್ತಿವೆ. ಹಾಗೆ ಮತ್ತೆ ಕೆಲವು ಕಡೆ ದೈವತ್ವಕ್ಕೆ ಸಂಬಂಧವಿಲ್ಲದ ಪ್ರಪಂಚ ವಿಷಯಗಳನ್ನು ಹೇಳುವುದು ನಡೆದಿದೆ. ಇಂತಹವೆಲ್ಲಾ ಗಮನಿಸಿದ ನಂತರ ಗಂಡಹೆಂಡತಿಯರ ಸಂಸಾರಗಳನ್ನು, ಆಸ್ತಿಗಳು ಹಂಚಿಕೊಳ್ಳುವುದನ್ನು, ವಿವಾಹ ವಿಚ್ಛೇದನೆ (ಡೈವರ್ಸ್) ತೆಗೆದುಕೊಳ್ಳುವುದನ್ನು, ಮದುವೆಗಳು ಮಾಡಿಕೊಳ್ಳುವುದನ್ನು ದೇವರು ಹೇಳುತ್ತಾನಾ! ಎಂಬ ಅನುಮಾನ ಬಾರದೆ ಇರುವುದಿಲ್ಲ. ಒಂದುಕಡೆ ಖುರ್‌ಆನ್ ಗ್ರಂಥ ದೈವಗ್ರಂಥವೇ ಎಂದು ತಿಳಿದರೂ, ಮತ್ತೊಂದುಕಡೆ ಕೆಲವರು ತಮ್ಮ ಭಾವನೆಗಳನ್ನು ಅದರಲ್ಲಿ ಸಿಲುಕಿಸಿದ್ದಾರೇನೊ ಎಂಬ ಅನುಮಾನ ಬರುತ್ತಿದೆ. ಅಂತಹ ವಾಕ್ಯಗಳನ್ನು ಬಿಟ್ಟು ಉಳಿದವಾಕ್ಯಗಳನ್ನು ಓದಿದರೆ ಖುರ್‌ಆನ್ ನಿಜವಾಗಲು ದೈವಗ್ರಂಥವೇ ಎಂದು ಯಾರಿಗಾದರೂ ತಿಳಿಯಬಲ್ಲದು. ಯಾರ ಮತವನ್ನು ಅವರು ದೊಡ್ಡದಾಗಿ ಹೇಳಿಕೊಂಡರೂ, ಯಾರ ಗ್ರಂಥವನ್ನು ಅವರು ದೊಡ್ಡದಾಗಿ ಹೇಳಿಕೊಂಡರೂ ನಾವು ಹಾಗೆ ಹೇಳುವುದಕ್ಕೆ ಸಾಧ್ಯವಿಲ್ಲ. ನಮಗೆ ಎಲ್ಲಾ ಮತಗಳೂ ಸಮಾನವೇ, ಹಾಗೆಯೇ ಎಲ್ಲ ಮತ ಗ್ರಂಥಗಳೂ ಸಮಾನವೇ. ನಾವು ನಿಸ್ವಾರ್ಥವಾಗಿ ಎಲ್ಲಿ ತಪ್ಪಿದ್ದರೆ ಅಲ್ಲಿ ತಪ್ಪಿದೆಯೆಂದು ಹೇಳದೆ ತಪ್ಪುವುದಿಲ್ಲ. ಹಾಗೆಯೇ ಎಲ್ಲಿ ಒಳ್ಳೆಯದಿದ್ದರೆ ಅಲ್ಲಿ ಒಳ್ಳೆಯದು ಇದೆಯೆಂದು ಹೇಳದೆ

ತಪ್ಪುವುದಿಲ್ಲ. ನಾವು ಏನು ಮಾಡುವುದು ನಮ್ಮನ್ನು ಗಮನಿಸುವವನು ಒಬ್ಬನಿದ್ದಾನೆಂದು ಜ್ಞಾಪಕದೊಂದಿಗೆ ನಾವು ನಡೆದುಕೊಳ್ಳಬೇಕಾಗಿದೆ. ಒಂದುವೇಳೆ ತಪ್ಪನ್ನು ಸರಿಯೆಂದು, ಸರಿಯನ್ನು ತಪ್ಪಾಗಿ ಹೊರಗಿನ ಪ್ರಜೆಗಳನ್ನು ನಾನು ಒಪ್ಪಿಸಿದರೂ ಒಳಗಿರುವ ಕಾವಲುದಾರನನ್ನು ಒಪ್ಪಿಸಲಾರೆವು.

ನಾವು ಪಕಕ್ಕೆ ಹೋಗದಂತೆ ಅಸಲಾದ ವಿಷಯಕ್ಕೆ ಬಂದರೆ, ಜಿಬ್ರಯೇಲ್ ಗ್ರಹ ಹೇಳಿದಾಗ ಮಾತ್ರವೇ ಅದು ತೆರೆಹಿಂಬದಿಯಿಂದ ಹೇಳಿದಂತಾಗಿದೆ. ಸೂರ್ಯನು ಗ್ರಹವೇ ಆದರೂ, ಆತನು ಹೇಳಿರುವುದು ತೆರೆಹಿಂಭಾಗ ಜ್ಞಾನ ಏಕೆ ಆಗಲಿಲ್ಲವೆಂದರೆ! ಸೂರ್ಯನು ಸಹ ತನ್ನ ಸ್ಥೂಲಶರೀರವನ್ನು ಆಕಾಶದಲ್ಲಿಯೇ ಬಿಟ್ಟು ಭೂಮಿಮೇಲಕ್ಕೆ ಬಂದು ಮನುವಿಗೆ ಜ್ಞಾನ ಹೇಳುವುದು ನಡೆದಿದೆ. ಸೂರ್ಯನ ಸ್ಥೂಲಶರೀರ ಉರಿಯುವ ಅಗ್ನಿಗೋಳ. ಅಷ್ಟುದೊಡ್ಡ ಶರೀರವನ್ನು ಬಿಟ್ಟು ಸೂಕ್ಷ್ಮ ಶರೀರದಿಂದ ಭೂಮಿಮೇಲಕ್ಕೆ ಬಂದು ಜಿಬ್ರಯೇಲ್ ಪ್ರವಕ್ತರೊಂದಿಗೆ ಮಾತನಾಡಿದಹಾಗೆ ಮನುವಿನೊಂದಿಗೆ ಮಾತನಾಡಲಿಲ್ಲ. ಭೂಮಿಮೇಲಕ್ಕೆ ಬಂದಿರುವ ಸೂರ್ಯನು ಒಂದುಬಾರಿ ಬಂದಿರುವುದು ಹೊರತು ಎರಡನೆಬಾರಿ ಸಹ ಬರಲಿಲ್ಲ. ಒಂದುಬಾರಿ ಭೂಮಿಮೇಲಕ್ಕೆ ಬಂದಿರುವ ಸೂರ್ಯನು ಒಂದೇ ದಿನ ತನಗೆ ತಿಳಿದ ಜ್ಞಾನವನ್ನು ಹೇಳಿಹೋಗುವುದು ನಡೆದಿದೆ. ಒಂದು ಬಾರಿಯೇ ಬಂದಿರುವ ಸೂರ್ಯನು ಮನುವಿನೊಂದಿಗೆ ತೆರೆಹಿಂಬದಿಯಿಂದ ಮಾತನಾಡಲಿಲ್ಲ. ಮನು ಹತ್ತಿರವಿರುವ ಮತ್ತೊಬ್ಬ ಮನುಷ್ಯನ ಶರೀರದೊಳಗೆ ಆವಹಿಸಿ, ಮನುಷ್ಯನ ಶರೀರದೊಂದಿಗೆ ಮಾತನಾಡುವುದು ನಡೆದಿದೆ. ಈಗಿನಕಾಲದಲ್ಲಿ ಅಲ್ಲಲ್ಲಿ ದೇವತೆಗಳು, ದೆವ್ವಗಳು ಮನುಷ್ಯರನ್ನು ಆವಹಿಸಿ ಮಾತನಾಡಿದಹಾಗೆ, ಸೂರ್ಯನು ಸಹ ಆ ದಿನ ಒಬ್ಬ ಮನುಷ್ಯನ ಶರೀರದಲ್ಲಿ ಪ್ರವೇಶಿಸಿ, ಆ ಮನುಷ್ಯನಲ್ಲಿನ ಜೀವಿಯು ನಿದ್ರೆಯಲ್ಲಿರುವಾಗ, ಸೂರ್ಯನು ಮನುಷ್ಯ ಶರೀರವನ್ನು ಉಪಯೋಗಿಸಿಕೊಂಡು ಮಾತನಾಡುವುದು ನಡೆದಿದೆ. ಆಗ ಸೂರ್ಯನು ಪ್ರತ್ಯಕ್ಷವಾಗಿದ್ದು ಮಾತನಾಡಿ ದಂತಾಗುತ್ತದೆ. ಸೂರ್ಯನ ಹಾವಭಾವವು ಮುಖವರ್ಚಸ್ಸಿನಲ್ಲಿ ಕಾಣಿಸುತ್ತಿರು

ವಾಗ, ಸೂರ್ಯನು ಪ್ರತ್ಯಕ್ಷವಾಗಿ ಮನುವಿನೊಂದಿಗೆ ಮಾತನಾಡುವುದು ನಡೆದಿದೆ. ಆಗ ಮನುವು ಸೂರ್ಯನ ಎದುರುಗಡೆ ಇದ್ದು ಸೂರ್ಯನು ಹೇಳಿದ ಮಾತುಗಳನ್ನು ಕೇಳಿದಂತಾಗಿದೆ. ಆದ್ದರಿಂದ ಸೂರ್ಯನು ತೆರೆಹಿಂದಿದ್ದು ಮಾತನಾಡಿದಂತಲ್ಲ. ಸೂರ್ಯನು ಮನುಷ್ಯನಲ್ಲಿ ಸೇರದಂತೆ, ಕಾಣಿಸದಹಾಗೆ ಮಾತನಾಡಿದ್ದರೆ ತೆರೆಹಿಂಬದಿಯಿಂದ ಮಾತನಾಡಿದಹಾಗೆ ಆಗುತ್ತಿತ್ತು. ಕೊನೆಗೆ ಎಷ್ಟು ವಿಧಗಳಲ್ಲಿ ಲೆಕ್ಕಿಸಿ ನೋಡಿದರೂ ಸೂರ್ಯನು ಪ್ರತ್ಯಕ್ಷವಾಗಿ ಮಾತನಾಡಿದವನೇ ಆಗುತ್ತಿದ್ದಾನೆ. ಆದ್ದರಿಂದ ಕಲಿಯುಗದಲ್ಲಿ ಜಿಬ್ರಯೇಲ್ ಮುಹಮ್ಮದ್ ಪ್ರವಕ್ತರೊಂದಿಗೆ ಮಾತನಾಡುವವರೆಗು ದೇವರು ಹೇಳಿದ ಎರಡನೇ ವಿಧಾನವಾದ ತೆರೆಹಿಂಬದಿಯಿಂದ ಮಾತನಾಡುವುದು ನಡೆಯಲಿಲ್ಲ. ಅದು ಜಿಬ್ರಯೇಲ್‌ನಿಂದಲೇ ನಡೆದಿದೆ.

ಸೂರ್ಯನು ವಾಣಿಯಿಂದ ಕೇಳಿದ ಜ್ಞಾನವನ್ನು ಹೇಳಿದ್ದರೂ ಆತನು ಗುರುವಲ್ಲವೆಂದು ಹೇಳಿದ್ದೇವೆ. ಏಕೆಂದರೆ ಒಬ್ಬರಿಂದ ಕೇಳಿರುವುದನ್ನು ಮತ್ತೆ ಹೇಳುವವನು ಬೋಧಕನು ಆಗುತ್ತಾನಾಗಲಿ, ಗುರುವು ಅಲ್ಲ. ಯಾರಿಂದಲೂ ಕೇಳದ ಬೋಧನೆಯನ್ನು, ಯಾರೂ ಹೇಳದ ಬೋಧನೆಯನ್ನು ಹೇಳುವವನು ಗುರು ಆಗುತ್ತಾನೆ. ಸೂರ್ಯನನ್ನು ಗುರು ಎಂದು, ಆದಿಗುರುವು ಎಂದು ಕೆಲವರೆಂದರೂ ಆತನು ನಿಜಕ್ಕು ಗುರುವು ಅಲ್ಲವೆಂದು ತಿಳಿದುಹೋಗಿದೆ. ಸೂರ್ಯನು ಬೋಧಕನೇ ಆದರೂ ಆತನು ಹೇಳಿದ ಜ್ಞಾನ ಗ್ರಂಥರೂಪವಾಗಲಿಲ್ಲ ಆದ್ದರಿಂದ ಆತನನ್ನು ಬೋಧಕನಾಗಿ ಸಹ ಯಾರೂ ಹೇಳಲಿಲ್ಲ. ಆತನು ಹೇಳಿದ ಜ್ಞಾನ ಗ್ರಂಥರೂಪವಾಗಿ ಬರೆಯಲ್ಪಟ್ಟಿದ್ದರೆ, ಆಗ ಆ ಗ್ರಂಥವನ್ನು ಹೇಳಿದವನು ಬೋಧಕನಾ, ಅಥವಾ ಗುರುವಾ ಎಂದು ನೋಡುತ್ತಿದ್ದೆವು, ಜಿಬ್ರಯೇಲ್ ಹೇಳಿದ ಜ್ಞಾನ ಖುರ್‌ಆನ್ ಆಗಿ ಬರೆಯಲ್ಪಟ್ಟಿದೆ ಆದ್ದರಿಂದ ಆತನನ್ನು ನೋಡಿ ಬೋಧಕನಾಗಿ ಹೇಳಿಕೊಂಡಿದ್ದೇವೆ. ಆತನು ಕೇಳಿದ ಬೋಧನೆಯನ್ನು ಹೇಳಿರುವುದರಿಂದ ಜಿಬ್ರಯೇಲ್ ಬೋಧಕನು ಆಗಿದ್ದಾನೆ. ಸೂರ್ಯನು ಕೃತಯುಗದಲ್ಲಿಯೇ ಅದೇ ಜ್ಞಾನವನ್ನು ಹೇಳಿದರೂ, ಸೂರ್ಯನು

ಬೋಧಕನಾಗಿ ಗುರುತಿಸಲ್ಪಡಲಿಲ್ಲ ಆದರೆ, ಪ್ರಜೆಗಳಿಂದ ಆದಿಗುರುವು ಎಂದು ಕರೆಸಿಕೊಂಡ ಘನತೆ ಆತನಿಗೆ ದಕ್ಕಿದೆ. ವಿಧಿವಿಧಾನದ ಪ್ರಕಾರ, ಆಧ್ಯಾತ್ಮಿಕ ಕಾನೂನು ಪ್ರಕಾರ, ಸೂರ್ಯನು ಗುರು ಅಲ್ಲ. ಸೂರ್ಯನು ಹೇಳಿದ ಜ್ಞಾನ ಗ್ರಂಥರೂಪ ಆಗಲಿಲ್ಲ, ಆದ್ದರಿಂದ ಆತನು ಬೋಧಕನಾಗಿ ಕರೆಯಲ್ಪಡಲಿಲ್ಲ.

ದ್ವಾಪರಯುಗ ಕೊನೆಯಲ್ಲಿ ಶ್ರೀಕೃಷ್ಣನು 90 ವರ್ಷಗಳ ವಯಸ್ಸಿನಲ್ಲಿ ಒಂದೇ ದಿನ, ಒಂದೇ ಬಾರಿ ಅರ್ಜುನನಿಗೆ ಜ್ಞಾನವನ್ನು ಹೇಳಿದ್ದಾನೆ. ಅರ್ಜುನನು ಕೇಳಿದ ಜ್ಞಾನವನ್ನು ವ್ಯಾಸನಿಗೆ ಹೇಳುವುದು ನಡೆದಿದೆ. ಕೃಷ್ಣನು ಹೇಳಿದ ಜ್ಞಾನವನ್ನು ಅರ್ಜುನನ ಮೂಲಕ ಕೇಳಿಸಿಕೊಂಡ ವ್ಯಾಸನು ಗ್ರಂಥರೂಪ ಮಾಡಿ, ಅದಕ್ಕೆ "ಭಗವದ್ಗೀತೆ' ಎಂದು ಹೆಸರು ಇಟ್ಟನು. ಒಂದು ಜ್ಞಾನ ಗ್ರಂಥರೂಪವಾದಾಗ ಅದನ್ನು ಹೇಳಿದವನನ್ನು ಯಾರೆಂದು ಲೆಕ್ಕಿಸಿ ನೋಡಬೇಕಾಗಿದೆ. ಭಗವದ್ಗೀತೆ ಜ್ಞಾನವನ್ನು ವ್ಯಾಸನು ಬರೆದರೂ, ಅರ್ಜುನನು ವ್ಯಾಸನಿಗೆ ಹೇಳಿದರೂ, ಅರ್ಜುನನಿಗೆ ಕೃಷ್ಣನು ತಿಳಿಸಿದ್ದಾನೆ. ಆದ್ದರಿಂದ ಕೃಷ್ಣನು ಬೋಧಕನಾ, ಗುರುವಾಯೆಂದು ನೋಡಬೇಕಾಗಿದೆ. ಹಾಗೆ ನೋಡಿದರೆ ಕೃಷ್ಣನು ತಾನು ಹೇಳಿದ ಜ್ಞಾನವನ್ನು ಎಲ್ಲಿಯೂ ಕೇಳಲಿಲ್ಲ. ಎಲ್ಲಿಯೂ ಕೇಳದ ಬೋಧನೆಯನ್ನು ತನಗೆತಾನಾಗಿ ಹೇಳುವವನನ್ನು ಬೋಧಕನೆಂದು ಅನ್ನಬಾರದು. ಆದ್ದರಿಂದ ಕೃಷ್ಣನು ಬೋಧಕನಲ್ಲ ಎಂದು ತಿಳಿದುಹೋಗಿದೆ. ಬೋಧಕನು ಅಲ್ಲದಿದ್ದರೆ ಇನ್ನು ಉಳಿದಿರುವುದು ಗುರುವೇ. ಆದ್ದರಿಂದ ಕೃಷ್ಣನನ್ನು ಗುರುವೆಂದು ಹೇಳಬಹುದಾ! ಎಂದು ಪ್ರಶ್ನಿಸಿಕೊಂಡು ನೋಡಿದರೆ ತಾನು ಹೇಳಿದ ಬೋಧನೆ ಅದಕ್ಕು ಮುಂಚೆ ಯಾರೂ ಹೇಳಿರಬಾರದು. ಆ ವಿಧವಾಗಿ ನೋಡಿದರೆ ಕೃಷ್ಣನು ಹೇಳಿದ ಬೋಧನೆ ಮೊದಲು ಆಕಾಶವಾಣಿ ಹೇಳಿದೆ. ಸೃಷ್ಟ್ಯಾದಿಯಲ್ಲಿ ಆಕಾಶವಾಣಿಯಿಂದ ಬಂದಿರುವ ಬೋಧನೆಯನ್ನೇ ಕೃಷ್ಣನು ಹೇಳಿದ್ದಾನೆ. ಎಂದರೆ ಕೃಷ್ಣನಿಗಿಂತ ಮೊದಲೇ ಆ ಬೋಧನೆ ಹೇಳಲ್ಪಟ್ಟಿದೆ. ಅದಕ್ಕು ಮೊದಲು "ಯಾರೂ ಹೇಳದ ಬೋಧನೆಯನ್ನು ಹೇಳಿದವನೇ ಗುರು" ಎನ್ನುವ ಸೂತ್ರದ ಪ್ರಕಾರ ನೋಡಿದರೆ ಆಕಾಶವಾಣಿ ಹೇಳಿದ ಬೋಧನೆಯನ್ನೇ ಹೇಳಿರುವುದರಿಂದ

ಕೃಷ್ಣನನ್ನು ಗುರು ಎನ್ನುವುದಕ್ಕೆ ಸಾಧ್ಯವಿಲ್ಲ ಎಂದು ಯಾರಾದರೂ ಅಂದುಕೊಳ್ಳಬಹುದು. ಆದರೆ ನಾನು ಮಾತ್ರ ಹಾಗೆ ಅಂದುಕೊಳ್ಳುವುದಿಲ್ಲ. ಕೃಷ್ಣನು ಗುರುವೇ ಎನ್ನುತ್ತೇನೆ. ಅಡ್ಡವಾಗಿ ಮಾತನಾಡುತ್ತಿದ್ದೇನೆಂದು ಅಂದುಕೊಳ್ಳಬೇಡಿ. ನಾನು ಹೇಳಿರುವುದು ಪೂರ್ತಿ ಸತ್ಯ. ಕೃಷ್ಣನು ತನ್ನ ಜೀವನದಲ್ಲಿ ಎಂದಾಗಲಿ, ಯಾರಿಗಾಗಲಿ ಜ್ಞಾನವನ್ನು ಹೇಳಲಿಲ್ಲ. ಒಂದೇ ಒಂದುದಿನ ಅರ್ಜುನನಿಗೆ ಯುದ್ಧ ಸಮಯಕ್ಕಿಂತ ಮೊದಲು ಕೆಲವು ನಿಮಿಷಗಳು ಮಾತ್ರವೇ ಜ್ಞಾನವನ್ನು ಹೇಳಿದ್ದಾನೆ. ಒಂದುದಿನ, ಒಂದುಹೊತ್ತು ಮಾತ್ರವೇ ಜ್ಞಾನವನ್ನು ಹೇಳಿದವನು ಗುರುವಾಗುತ್ತಾನಾ? ಎನ್ನುವ ಪ್ರಶ್ನೆ ಸಹ ಬರುತ್ತದೆ. ಅದಕ್ಕು ಮೊದಲೇ ಗುರುವಾದವನನ್ನು ಗುರುವಾಗುತ್ತಾನಾ ಎಂದು ಕಾದು ನೋಡಬೇಕಾದ ಕೆಲಸವಿಲ್ಲ ಎಂದು ಉತ್ತರವನ್ನು ಹೇಳಬಹುದು. "ಒಬ್ಬರು ಹೇಳಿದ ಜ್ಞಾನವನ್ನು ಹೇಳಿದವನು ಬೋಧಕನೇ" ಎನ್ನುವ ಸೂತ್ರದ ಪ್ರಕಾರ ಕೃಷ್ಣನು ಬೋಧಕನೇ ಆಗುತ್ತಾನೆಂದು ಎಲ್ಲರೂ ಅಂದುಕೊಳ್ಳಬಹುದು. ಹಾಗಾದರೂ ಅದೇ ಸೂತ್ರದ ಪ್ರಕಾರ ಕೃಷ್ಣನು ಗುರುವೇ ಆಗುತ್ತಾನೆಯೇ ಹೊರತು ಬೋಧಕನಲ್ಲ, ಅದು ಹೇಗೆ ಎಂದು ಕೇಳಿದರೆ ಕೃಷ್ಣನು ಹೇಳಿದ ಜ್ಞಾನವನ್ನು ಅದಕ್ಕು ಮೊದಲು ಅಲ್ಲಿಯವರೆಗು ಯಾರೂ ಹೇಳಿರಲಿಲ್ಲ. ಆಕಾಶವಾಣಿ ಹೇಳಿದೆಯಲ್ಲವೆ! ಎಂದರೆ ಅಲ್ಲಿ ಆಕಾಶವಾಣಿಯಾಗಿ ಹೇಳಿರುವುದು ಸಹ ಕೃಷ್ಣನೇ ಆಗಿರುವುದರಿಂದ ಸೃಷ್ಠಿ ಆದಿಯಲ್ಲಿ ಹೇಳಿದರೂ, ದ್ವಾಪರಯುಗದಲ್ಲಿ ಹೇಳಿದರೂ, ಅದು ಕೃಷ್ಣನು ಹೇಳಿರುವುದೇ ಆಗಿರುವುದರಿಂದ ಸೂತ್ರದ ಪ್ರಕಾರ ಕೃಷ್ಣನನ್ನು ಗುರುವೆಂದು ಹೇಳಬಹುದು.

ಕೃಷ್ಣನು ಕಣ್ಣಿಗೆ ಕಾಣಿಸುವ ವ್ಯಕ್ತಿ ಆದರೂ, ಆತನಲ್ಲಿರುವ ಆತ್ಮವೇ ಆಕಾಶದಲ್ಲಿ ಹೇಳಿದ ಆತ್ಮವೆಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ಜ್ಞಾನಯೋಗವೆಂಬ ಅಧ್ಯಾಯದಲ್ಲಿ ಮೊದಲ ಶ್ಲೋಕದಲ್ಲಿಯೇ **"ಮೊದಲು ಸೂರ್ಯನಿಗೆ ಹೇಳಿದ ಜ್ಞಾನವನ್ನೇ ನಿನಗೆ ಹೇಳುತ್ತಿದ್ದೇನೆ"** ಎಂದು ಕೃಷ್ಣನು ಹೇಳಿದ್ದಾನೆ. ಇದನ್ನನುಸರಿಸಿ ಸೃಷ್ಠಿ ಆದಿಯಲ್ಲಿ ಸೂರ್ಯನಿಗೆ ಹೇಳಿದವನು

ಕೃಷ್ಣನಲ್ಲಿನ ಆತ್ಮವೇಯೆಂದು ತಿಳಿಯುತ್ತಿದೆ. ಸೂರ್ಯನಿಗೆ ಹೇಳಿರುವುದು ತಾನೇ ಆದ್ದರಿಂದ, ಅರ್ಜುನನಿಗೆ ಹೇಳಿರುವುದು ಸಹ ಆತನೇ ಆದ್ದರಿಂದ, ಇತರರು ಯಾರೂ ಹೇಳದ ಜ್ಞಾನವನ್ನೇ ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆಂದು ಅರ್ಥವಾಗುತ್ತಿದೆ. ಅಷ್ಟೇ ಅಲ್ಲದೆ ಇತರರು ಹೇಳಿದ ಜ್ಞಾನವನ್ನು ಕೃಷ್ಣನು ಅರ್ಜುನನಿಗೆ ಹೇಳಲಿಲ್ಲ ಆದ್ದರಿಂದ ಆತನನ್ನು ಬೋಧಕನು ಎನ್ನುವುದಕ್ಕೆ ಸಾಧ್ಯವಿಲ್ಲ. ಮೊದಲು ಹೇಳಿರುವುದು ಸಹ ಆತನೇಯಾದ್ದರಿಂದ, ನಂತರ ಹೇಳಿದವನು ಸಹ ಆತನೇಯಾದ್ದರಿಂದ, ಕೃಷ್ಣನನ್ನು ಬೋಧಕನೆನ್ನದೆ ಗುರುವೆಂದೇ ಹೇಳಬೇಕು. ಕೃಷ್ಣನು ಹೇಳಿದ ಜ್ಞಾನವನ್ನು ಭಗವದ್ಗೀತೆಯೆಂಬ ಹೆಸರಿನಿಂದ ಗ್ರಂಥವಾಗಿ ತಯಾರಾಗಿರುವುದರಿಂದ ಅದನ್ನು ಹೇಳಿದವನು ಯಾರು? ಎಂದು ನೋಡಬೇಕಾಗಿ ಬಂದಿದೆ. ಹಾಗೆ ನೋಡಿದರೆ ಕೃಷ್ಣನು ಎಲ್ಲಾ ವಿಧಗಳಲ್ಲಿ ಗುರುವೇಯೆಂದು ನಿರ್ಧಾರವಾಗಿಹೋಗಿದೆ. ಪ್ರಪಂಚದಲ್ಲಿ ದೇವರ ಜ್ಞಾನ ಮೊಟ್ಟಮೊದಲು ಗ್ರಂಥರೂಪದಲ್ಲಿ ಹೊರಗೆ ಬಂದಿರುವುದು ದ್ವಾಪರಯುಗ ಅಂತ್ಯದಲ್ಲಿಯೇ ಎಂದು ತಿಳಿಯಬೇಕು. ಆದ್ದರಿಂದ ಭಗವದ್ಗೀತೆ ಪ್ರಥಮ ದೈವಗ್ರಂಥವಾಗಿ ಹೇಳಲ್ಪಡುತ್ತಿದೆ. ಭಗವದ್ಗೀತೆಯನ್ನು ಹೇಳಿದ ಕೃಷ್ಣನು ಗುರು ಆಗಿರುವುದರಿಂದ ಮೊದಲ ಗುರುವಾಗಿ ಕೃಷ್ಣನು ತಿಳಿಯಲ್ಪಟ್ಟಿದ್ದಾನೆ. ಈ ಗ್ರಂಥದಲ್ಲಿ ಇಬ್ಬರು ಗುರುಗಳೆಂದು ಹೇಳಿಕೊಂಡಿದ್ದೇವೆ. ಇಬ್ಬರಲ್ಲಿ ಒಬ್ಬ ಗುರು ದ್ವಾಪರಯುಗದಲ್ಲಿ ಬಂದಹಾಗೆ ತಿಳಿದುಹೋಗಿದೆ. ಹಾಗೆಯೇ ಮೂರು ಗ್ರಂಥಗಳಲ್ಲಿ ದ್ವಾಪರಯುಗದ ಕೊನೆಯಲ್ಲಿ ಬಂದಿರುವ "ಭಗವದ್ಗೀತೆ"ಯಾಗಿ ಒಂದು ಗ್ರಂಥ ತಿಳಿದುಹೋಗಿದೆ. ಹಾಗೆಯೇ ಕಲಿಯುಗದಲ್ಲಿ ಜಿಬ್ರಯೇಲ್ ಬೋಧಕನು ಹೇಳಿದ ಜ್ಞಾನ ಖುರ್‌ಆನ್ ಗ್ರಂಥರೂಪವಾಗಿ ತಿಳಿದುಹೋಗಿದೆ. ಈ ವಿಧವಾಗಿ ಎರಡು ಗ್ರಂಥಗಳು ತಿಳಿದುಹೋಗಿವೆ. ಒಬ್ಬ ಬೋಧಕನು, ಒಬ್ಬ ಗುರುವು ತಿಳಿದುಹೋಗಿದ್ದಾರೆ. ಇನ್ನೂ ತಿಳಿಯಬೇಕಾಗಿರುವವು ಒಂದು ಗ್ರಂಥ, ಒಬ್ಬ ಗುರು ಎಂದು ಜ್ಞಾಪಕದಲ್ಲಿ ಇಟ್ಟುಕೊಳ್ಳಿ.

ದ್ವಾಪರಯುಗ ಕೊನೆಯಲ್ಲಿ ಪ್ರಥಮ ದೈವಗ್ರಂಥ ಭಗವದ್ಗೀತೆ ಹೊರಬಂದಿದೆ. ಅದರೊಂದಿಗೆ ಗುರು ಸಹ ಹೊರಬಿದ್ದಿದ್ದಾರೆ. ಕಲಿಯುಗದಲ್ಲಿ

ಸುಮಾರು 1400 ವರ್ಷಗಳ ಕೆಳಗೆ ಜಿಬ್ರಯೇಲ್ ಗ್ರಹ ಹೇಳಿದ ಬೋಧನೆ, ಖುರ್‌ಆನ್ ಗ್ರಂಥವಾಗಿ ತಯಾರಿಯಾಗಿದೆ. ಆಗ ಖುರ್‌ಆನ್‌ನಲ್ಲಿಯೇ ಬರೆಯಲ್ಪಟ್ಟಿರುವುದನ್ನು ಅನುಸರಿಸಿ ಅಂತಿಮ ದೈವಗ್ರಂಥ ಖುರ್‌ಆನ್ ಎಂದು ತಿಳಿದುಹೋಗಿದೆ. ಅಂತಿಮ ದೈವಗ್ರಂಥವನ್ನು ಹೇಳಿದ ಜಿಬ್ರಯೇಲ್ ಬೋಧಕನು ಎಂದು ಸಹ ತಿಳಿದುಹೋಗಿದೆ. ಈ ವಿಧವಾಗಿ ದ್ವಾಪರ ಯುಗದಲ್ಲಿ ಪ್ರಥಮ ದೈವಗ್ರಂಥ, ಕಲಿಯುಗದಲ್ಲಿ ಅಂತಿಮ ದೈವಗ್ರಂಥ ಹೊರಬಂದಿವೆ. ಮೂರು ಗ್ರಂಥಗಳಲ್ಲಿ ಎರಡು ಗ್ರಂಥಗಳು ತಿಳಿದುಹೋಗಿ ಒಂದು ಗ್ರಂಥ ಮಾತ್ರ ತಿಳಿಯಬೇಕಾಗಿದೆ. ಹಾಗೆಯೇ ಒಬ್ಬ ಗುರು ಸಹ ತಿಳಿಯಬೇಕಾಗಿದೆ. ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ! ಒಬ್ಬ ಗುರು ತಿಳಿದುಹೋಗಿದ್ದಾನೆ, ಇನ್ನೊಬ್ಬ ಗುರು ತಿಳಿಯಬೇಕಾಗಿದೆ ಎಂದು ಹೇಳಿದ್ದೀರ ಅಲ್ಲವೆ! ಪ್ರಪಂಚದಲ್ಲಿ ಇಬ್ಬರು ಗುರುಗಳು ಇರುತ್ತಾರಾ? ವಾಸ್ತವಕ್ಕೆ ಎಷ್ಟುಜನ ಗುರುಗಳಿರುತ್ತಾರೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ ನೋಡಿರಿ. ಗುರು ಎಂಬುವವನು ಪ್ರಪಂಚಕ್ಕೆಲ್ಲ ಒಬ್ಬನೇ ಇರುತ್ತಾನೆ. ಇಬ್ಬರು ಅಥವಾ ಮೂವರು ಅಥವಾ ಬೇರೆಬೇರೆ ಗುರುಗಳು ಇರುವುದಕ್ಕೆ ಅವಕಾಶವಿಲ್ಲ. **ಗುರು ಎಂದರೆ ದೇವರು ಎಂದು ಅರ್ಥ**. ದೇವರಿಗೆ ಮತ್ತೊಂದು ಹೆಸರಾಗಿ ಗುರು ಎಂದು ಹೇಳುತ್ತಿರುತ್ತೇವೆ. ಪ್ರಪಂಚಕ್ಕೆಲ್ಲಾ ಒಬ್ಬನೇ ದೇವರು ಇದ್ದಂತೆ. ಗುರು ಸಹ ಒಬ್ಬನೇ ಇರುತ್ತಾನೆ. **ಗುರುವಿಗೂ ದೇವರಿಗೂ ಸ್ವಲ್ಪವೂ ವ್ಯತ್ಯಾಸ ಇರುವುದಿಲ್ಲ**. ಆದ್ದರಿಂದ ಎಲ್ಲರೂ ಗುರುವನ್ನು ಗುರುತಿಸಲಾರರೆಂದು ಹೇಳಿದ್ದೇವೆ. ದೇವರನ್ನು ದೇವರು ಎನ್ನಬಹುದು ಅಲ್ಲವೆ! ಗುರು ಎಂದು ಏಕೆ ಅನ್ನಬೇಕು? ಎಂದು ಯಾರಿಗಾದರೂ ಪ್ರಶ್ನೆಬರಬಹುದು. ಅದಕ್ಕು ಸಹ ಉತ್ತರವನ್ನು ಹೀಗೆ ಹೇಳಬಹುದು. ನಿರಾಕಾರವಾಗಿರುವವನನ್ನು ದೇವರು ಎನ್ನಬಹುದು. ಅದೇ ದೇವರೆ ಸಾಕಾರವಾಗಿ ಬಂದರೆ ಹಾಗೆ ಬಂದಿರುವವನನ್ನು ಗುರುಯೆಂದು ಹೇಳಬಹುದು. ಭೂಮಿಮೇಲೆ ಜ್ಞಾನವನ್ನು ತಿಳಿಸುವುದಕ್ಕೆ ಕೃಷ್ಣನು ಸಾಕಾರರೂಪದಲ್ಲಿ ಬಂದಿದ್ದಾನೆ. ಹಾಗೆ ಬಂದ ಕೃಷ್ಣನೇ ಗುರುವಾಗಿ ತಿಳಿಯಲ್ಪಟ್ಟಿದ್ದಾನೆ. ನಂತರ ಎಂದಾದರೂ, ಯಾವ ರೂಪದಲ್ಲಾದರೂ, ಯಾವ

ಹೆಸರಿರುವ ಮನುಷ್ಯನಾಗಿ ಬಂದರೂ, ಆತನು ಮೊದಲು ಬಂದ ಗುರುವೇಯಾಗಲಿ ಎರಡನೆ ಗುರುವಲ್ಲ. ಮೊದಲನೆ ಗುರುವಿಗು ಎರಡನೆಬಾರಿ ಬಂದಿರುವ ಗುರುವಿಗು ಆಕಾರದಲ್ಲಾಗಲಿ, ಹೆಸರಿನಲ್ಲಾಗಲಿ ವ್ಯತ್ಯಾಸವಿರಬಹುದು. ಆದರೆ ಒಳಗಿರುವ ಆತ್ಮನಲ್ಲಿ ವ್ಯತ್ಯಾಸ ಇರುವುದಿಲ್ಲ. ಮೊದಲು ಬಂದವನೇ ಎರಡನೆಯಬಾರಿ ಬಂದಿದ್ದಾನೆಂದು ಹೇಳಬಹುದು. ಭೂಮಿಮೇಲೆ ಅವಶ್ಯಕತೆಯನ್ನು ಅನುಸರಿಸಿ ನಿರಾಕಾರವಾದ ದೇವರು ಕಾಣಿಸುವ ಗುರುವಾಗಿ ಎಷ್ಟುಬಾರಿಯಾದರೂ ಭೂಮಿಮೇಲಕ್ಕೆ ಬರಬಹುದು. ಎಷ್ಟುಬಾರಿ ಬಂದಿರುವುದು ತಿಳಿಯುವುದಕ್ಕೆ, ಯಾವಾಗ ಬಂದು ಏನು ಮಾಡಿದ್ದಾನೆಂದು ತಿಳಿಯುವುದಕ್ಕೆ ನಾವು ಒಂದನೆಯ ಗುರು, ಎರಡನೆಯ ಗುರು ಎಂದು ಹೇಳಿಕೊಳ್ಳಬಹುದು. ಹಾಗೆ ಎಷ್ಟುಜನ ಗುರುಗಳಾಗಿ ಹೇಳಿಕೊಂಡರೂ, ಗುರು ಎಷ್ಟುಬಾರಿ ಭೂಮಿಮೇಲಕ್ಕೆ ಬಂದರೂ ಆತನು ಮಾತ್ರ ಒಬ್ಬನೇ. ಗುರುವಿನಲ್ಲಿ ಬೇಧಗಳು ವ್ಯತ್ಯಾಸಗಳು ಇರುವುದಿಲ್ಲ. ಸೂತ್ರದ ಪ್ರಕಾರ **"ಕಾಣಿಸುವ ದೇವರೇ ಗುರು"**. **ದೇವರು ಕಾಣಿಸಿದರೆ ಗುರು ಆಗುತ್ತಾನೆ.** ಕಾಣಿಸದೆಹೋದರೆ ದೇವರೇ ಆಗುತ್ತಾನೆ.

ಭಗವದ್ಗೀತೆಯನ್ನು ಹೇಳಿದಾಗ ಬಂದಿರುವ ಕೃಷ್ಣನು ಕಾಣಿಸುವ ವ್ಯಕ್ತಿಯಾದರೂ ಆತನು ಸಾಮಾನ್ಯವಾದ ಮನುಷ್ಯನಲ್ಲ. ಪ್ರಪಂಚವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿರುವ ದೇವರೇ ಆ ರೂಪದಲ್ಲಿ ಬಂದು ಕೃಷ್ಣನು ಎಂದು ಕರೆಯಲ್ಪಟ್ಟಿದ್ದಾನೆ. ಆದರೂ **ಕೃಷ್ಣನೇ ದೇವರು ಎಂದು ಯಾರೂ ಗುರುತುಹಿಡಿಯದಹಾಗೆ ನಟಿಸಿಹೋಗಿದ್ದಾನೆ.** ಸಾಮಾನ್ಯವಾಗಿ ಕೃಷ್ಣನನ್ನು ದೇವರೆಂದು ಯಾರೂ ಗುರುತಿಸಲಾರರು. ಎಷ್ಟೋ ವಿಶೇಷವಾದ ಜ್ಞಾನ ತಿಳಿದವರೇ ಮನುಷ್ಯನಾಗಿರುವ ದೇವರನ್ನು ಗುರುವಾಗಿ ಗುರುತಿಸಬಲ್ಲರು. ಜ್ಞಾನ ಇಲ್ಲದವರು ಗುರುವನ್ನು ಗುರುತಿಸಲಾರರು. ಆದ್ದರಿಂದ ನಾವು ಎಲ್ಲಾ ತಿಳಿದು ಕೃಷ್ಣನನ್ನು ಗುರು ಎಂದರೂ ಅಥವಾ ದೇವರು ಎಂದರೂ ಈಗಲೂ ಒಪ್ಪಿಕೊಳ್ಳದವರು ಬಹಳಜನ ಇದ್ದಾರೆ. ದ್ವಾಪರಯುಗದಲ್ಲಿ ಕೃಷ್ಣನಾಗಿ ಬಂದವನನ್ನು ಸುಲಭವಾಗಿಯೋ, ಇಲ್ಲವೆ ಕಷ್ಟವಾಗಿಯೋ ಯಾವುದೋ

ಒಂದುವಿಧವಾಗಿ ಗುರುವಾಗಿ, ದೇವರಾಗಿ ಗುರುತುಹಿಡಿದಿದ್ದೇವೆ. ದೇವರು ಅಂತಹ ಅವಕಾಶವನ್ನು ಕೊಡುವುದಕ್ಕೆ ಭಗವದ್ಗೀತೆಯಲ್ಲಿ ಜ್ಞಾನಯೋಗದಲ್ಲಿ ಮೊದಲಿನಲ್ಲಿಯೇ ಮೊದಲು ಸೂರ್ಯನಿಗೆ ಹೇಳಿದ ಜ್ಞಾನವನ್ನೇ ಈಗ ನಿನಗೆ ಹೇಳುತ್ತಿದ್ದೇನೆ ಎಂದು ಅರ್ಜುನನೊಂದಿಗೆ ಹೇಳಿದಾಗ ಆ ಮಾತಿನಲ್ಲಿ ಆಧಾರ ಸ್ವಲ್ಪ ದೊರೆತಿದೆ. ಅದರಿಂದ ಕೃಷ್ಣನು ದೇವರೇಯೆಂದು, ಕೃಷ್ಣನು ಗುರುವೇಯೆಂದು ನಿರ್ಣಯಿಸಿ ಹೇಳುತ್ತಿದ್ದೇನೆ.

ಭಗವದ್ಗೀತೆಯನ್ನು ಹೇಳಿದವನು ಗುರುವೆಂದು ತಿಳಿದುಹೋಗಿದೆ. ಇನ್ನು ಎರಡನೆಯಬಾರಿ ಗುರು ಯಾವಾಗ ಬಂದಿದ್ದಾನೆ ಎಂದು ನೋಡಬೇಕಾದ ಅಗತ್ಯವಿದೆ. ಎರಡನೆಯಬಾರಿ ಬಂದವವನನ್ನು ಮೊದಲಬಾರಿ ಬಂದವನನ್ನು ಸೇರಿಸಿ ಇಬ್ಬರು ಗುರುಗಳೆಂದರೂ ಇಬ್ಬರೂ ಒಂದೇ ಗುರುವೆಂದು ಜ್ಞಾಪಕವಿಟ್ಟುಕೊಳ್ಳಬೇಕು. ಈಗ ಗುರು ಎರಡನೆಯಬಾರಿ ಬಂದುಹೋದಹಾಗೆ ತಿಳಿದುಹೋಗುತ್ತಿದೆ. ಏಕೆಂದರೆ ಪ್ರಥಮ ದೈವಗ್ರಂಥ ಭಗವದ್ಗೀತೆಯಾದಾಗ, ಅಂತಿಮ ದೈವಗ್ರಂಥ ಖುರ್‌ಆನ್ ಆದಾಗ ಮಧ್ಯದಲ್ಲಿನ ಗ್ರಂಥ ಬಂದಿರುತ್ತದೆಂದು, ಅದನ್ನು ಬೋಧಿಸುವುದಕ್ಕೆ ಗುರು ಎರಡನೆಯಬಾರಿ, ಎರಡನೆಯ ಗುರುವಾಗಿ ದೇವರು ಬಂದಿರುತ್ತಾನೆಂದು ಅರ್ಥವಾಗುತ್ತಿದೆ. ಆದರೆ ಹೇತುಬದ್ಧವಾಗಿ ಇಂಥವನೇ ಎರಡನೆಯ ಗುರುವೆಂದು, ಇಂತಹ ಗ್ರಂಥವೇ ಎರಡನೆಯ ಗ್ರಂಥವೆಂದು ಹೇಳುವುದಕ್ಕೆ ಆಧಾರ ದೊರೆತರೆ ಸುಲಭವಾಗಿ ಗ್ರಂಥವನ್ನೂ, ಗುರುವನ್ನೂ ಗುರುತಿಸಬಹುದು. ಆದ್ದರಿಂದ ಮೊದಲ ಗ್ರಂಥವಾದ ಭಗವದ್ಗೀತೆ ತಯಾರಾದ ಕಾಲದಿಂದ, ಅಂತಿಮ ದೈವಗ್ರಂಥ ಖುರ್‌ಆನ್ ತಯಾರಾದ ಕಾಲದವರೆಗೂ ಮಧ್ಯದಲ್ಲಿರುವ ಕಾಲದಲ್ಲಿ ಬಂದಿರುವ ಆಧ್ಯಾತ್ಮಿಕ ಗ್ರಂಥಗಳು ಯಾವುದು? ಅವುಗಳನ್ನು ಹೇಳಿದವರು ಯಾರು? ಎಂದು ನೋಡಬೇಕಾಗಿ ಬಂದಿದೆ. ಆ ಲೆಕ್ಕಪ್ರಕಾರ ದ್ವಾಪರಯುಗ ಕೊನೆಯಿಂದ ಕಲಿಯುಗದಲ್ಲಿ ಖುರ್‌ಆನ್ ಗ್ರಂಥ ಬಂದಿರುವ ಕಾಲದವರೆಗು 3600 ವರ್ಷಗಳ ಮಧ್ಯಕಾಲವನ್ನು ನೋಡಿದರೆ ಒಂದು ಆಧಾರ ದೊರಕುತ್ತದೆ. ಆ ಆಧಾರದ ಪ್ರಕಾರ ಗಮನಿಸಿದರೆ ಕಲಿಯುಗ

ಪ್ರಾರಂಭವಾಗಿ 3000 ವರ್ಷಗಳು ಕಳೆದ ನಂತರ ಇಜ್ರಾಯೆಲ್ ದೇಶದಲ್ಲಿ ಹುಟ್ಟಿದ ಬೈಬಲ್ ಗ್ರಂಥದಲ್ಲಿ ಒಂದೇ ಒಂದು ವಾಕ್ಯವನ್ನು ನೋಡಿದರೆ ಭಗವದ್ಗೀತೆಗು ಖುರ್‌ಆನ್‌ಗು ಮಧ್ಯದಲ್ಲಿ ಬಂದಿರುವ ಗ್ರಂಥ ಬೈಬಲ್ ಎಂದು ತಿಳಿದುಹೋಗುತ್ತಿದೆ.

ಪ್ರತಿ ವಿಷಯಕ್ಕು ಅದು ಸತ್ಯವೆನ್ನುವುದಕ್ಕೆ ಹೇತುಬದ್ಧತೆ, ಶಾಸ್ತ್ರಬದ್ಧತೆ ಅಗತ್ಯ. ದ್ವಾಪರಯುಗದ ಕೊನೆಯಿಂದ ಕಲಿಯುಗದಲ್ಲಿನ 3600 ವರ್ಷಗಳ ಕಾಲದಲ್ಲಿ ತಯಾರಾದ ಗ್ರಂಥಗಳನ್ನು ಪರಿಶೀಲಿಸಿ ನೋಡಿದರೆ ಬೈಬಲ್‌ನಲ್ಲಿರುವ ಎಷ್ಟೋ ವಾಕ್ಯಗಳಲ್ಲಿ ಒಂದು ವಾಕ್ಯ, ಆಧಾರವಾಗಿ ದೊರೆತಿದೆ. ಆಗ ಅದನ್ನು ಹೇಳಿದ ವ್ಯಕ್ತಿ ಯೇಸುಯೆಂದು ತಿಳಿದಿದೆ. ಯೇಸುನನ್ನು ನೋಡಿದರೆ ಏನು ತಿಳಿಯುದು ಆದರೆ, ಆತನು ಹೇಳಿದ ಒಂದು ಮಾತೇ ಎಷ್ಟೋ ಆಲೋಚಿಸುವಹಾಗೆ ಮಾಡಿದೆ. ಆ ವಾಕ್ಯವನ್ನು ಕುರಿತು ಹೇಳಿಕೊಳ್ಳುವುದಕ್ಕೆ ಮೊದಲು, ಆ ವಾಕ್ಯಕ್ಕಿರುವ ಬೆಲೆಯನ್ನು ತಿಳಿಯುವುದಕ್ಕೆ, ಸ್ವಲ್ಪ ವಿವರವನ್ನು ತಿಳಿಯಬೇಕಾಗಿದೆ. ಯೇಸು ಎಂಬ ವ್ಯಕ್ತಿ ಭೂಮಿಮೇಲೆ ಹುಟ್ಟಿ ಯಾವ ಗುರುತು ಇಲ್ಲದ ವ್ಯಕ್ತಿಯಾಗಿ 30 ವರ್ಷಗಳು ಕಳೆದು ನಂತರ ಮೂರು ವರ್ಷಗಳು ಮಾತ್ರ ಜ್ಞಾನಬೋಧನೆಯನ್ನು ಹೇಳಿ ಮರಣಿಸಿದ್ದಾನೆ. ಇದನ್ನನುಸರಿಸಿ ಯೇಸು ಕೇವಲ 33 ವರ್ಷಗಳು ಬದುಕಿದ್ದಾನೆಂದು ಹೇಳಬಹುದು. 33 ವರ್ಷಗಳು ಬದುಕಿದ ಯೇಸು ಮರಣಿಸಿದ ನಂತರ 33 ಗಂಟೆಗಳಿಗೆ ಮತ್ತೆ ಮೇಲೆದ್ದಿದ್ದಾನೆ. ಹಾಗೆ ಮರಣಿಸಿದ ನಂತರ ಬದುಕಿ ಹೊರಗೆ ಬಂದು 40 ದಿನಗಳವರೆಗು ತನ್ನ ಶಿಷ್ಯರಿಗೆ ಕಾಣಿಸುವುದು, ಅವರೊಂದಿಗೆ ಮಾತನಾಡುವುದು ನಡೆದಿದೆ. ಆ ವಿಧವಾಗಿ 40 ದಿನಗಳಲ್ಲಿ 33 ಬಾರಿ ಮಾತ್ರವೇ ಆತನ ಶಿಷ್ಯರಿಗೆ ಯೇಸು ಕಾಣಿಸುವುದು ನಡೆದಿದೆ. ನಂತರ ಎಂದಿಗೂ ಶಿಷ್ಯರಿಗೆ ಸಹ ಕಾಣಿಸದಹಾಗೆ ಹೋಗಿದ್ದಾನೆ.

ಯೇಸು ತನ್ನ ಶಿಷ್ಯರಿಗೆ ಕಟ್ಟಕಡೆಯದಾಗಿ ಕಾಣಿಸಿರುವುದು ಮರಣಿಸಿ ಎದ್ದ ನಂತರ 33ನೇ ದರ್ಶನದಲ್ಲಿಯೇ ಎಂದು ಹೇಳಬಹುದು. 33ನೇ ಬಾರಿ

ಕೊನೆಯದಾಗಿ ಕಾಣಿಸಿದ ಯೇಸು ತನ್ನ ಶಿಷ್ಯರೊಂದಿಗೆ ಕೊನೆಯದಾಗಿ ಮೂರು ವಾಕ್ಯಗಳನ್ನು ಹೇಳಿದ್ದಾನೆ. ಆ ಮಾತುಗಳನ್ನು ಬೈಬಲ್‌ಗ್ರಂಥದಲ್ಲಿ ಮತ್ತಾಯ ಸುವಾರ್ತೆ ಕೊನೆಯ 28ನೇ ಅಧ್ಯಾಯದಲ್ಲಿ 18, 19, 20 ವಾಕ್ಯಗಳಲ್ಲಿ ನೋಡಬಹುದು. ಆ ವಾಕ್ಯಗಳು ಹೀಗೆ ಇವೆ. **(18) ಪರಲೋಕದಲ್ಲಿಯೂ, ಭೂಮಿಮೇಲೆಯೂ ನನಗೆ ಸರ್ವಾಧಿಕಾರವು ಕೊಡಲಾಗಿದೆ. (19) ಆದ್ದರಿಂದ ನೀವು ಹೋಗಿ ಸಮಸ್ತ ಜನರನ್ನು ಶಿಷ್ಯರನ್ನಾಗಿ ಮಾಡಿರಿ, ತಂದೆಯೊಂದರ, ಕುಮಾರನೊಂದರ, ಪರಿಶುದ್ಧಾತ್ಮ ಒಂದರ, ನಾಮದೊಳಗೆ ಅವರಿಗೆ ಬಾಪ್ತಿಸ್ಮಕೊಡ್ರಿ. (20)ನಾನು ನಿಮಗೆ ಯಾವ ಯಾವ ಸಂಗತಿಗಳನ್ನು ಆಜ್ಞಾಪಿಸಿದ್ದೇನೊ ಅವುಗಳೆಲ್ಲವನ್ನು ಕೈಗೊಳ್ಳಬೇಕೆಂದು ಅವರಿಗೆ ಬೋಧಿಸು. ಇಗೋ ನಾನು ಯುಗ ಸಮಾಪ್ತಿಗೋಸ್ಕರ, ಸದಾಕಾಲ ನಿಮ್ಮೊಂದಿಗೆ ಕೂಡ ಇದ್ದೇನೆಂದು ಅವರಿಗೆ ಹೇಳಿದನು**. ಯೇಸುಪ್ರಭು ಹೇಳಿದ ಈ ಮೂರು ವಾಕ್ಯಗಳು ಆತನು ಕಟ್ಟಕಡೆಯದಾಗಿ ಹೇಳಿದ ಮಾತುಗಳು. ಆದ್ದರಿಂದ ಈ ಮೂರು ವಾಕ್ಯಗಳು ಎಷ್ಟೋ ಪ್ರಾಧಾನ್ಯತೆಯಿಂದ ಕೂಡುಕೊಂಡಿವೆ. ಮೂರು ವಾಕ್ಯಗಳು ಆಧ್ಯಾತ್ಮಿಕದಲ್ಲಿ ಶ್ರೇಷ್ಠವಾದವೇ ಆದರೂ ಅವುಗಳಲ್ಲಿ ಮಧ್ಯದಲ್ಲಿರುವ 19ನೇ ವಾಕ್ಯವನ್ನನುಸರಿಸಿ ಮಧ್ಯ ಗ್ರಂಥ ಬೈಬಲ್‌ಯೇ ಎಂಬ ಆಧಾರ ದೊರೆತಿದೆ. 19ನೇ ವಾಕ್ಯದಲ್ಲಿ "ತಂದೆಯೊಂದರ, ಕುಮಾರನೊಂದರ, ಪರಿಶುದ್ಧಾತ್ಮ ವೊಂದರ ನಾಮದೊಳಗೆ ಅವರಿಗೆ ಬಾಪ್ತಿಸ್ಮ ಕೊಡುತ್ತಾ ಸಮಸ್ತ ಜನರನ್ನು ಶಿಷ್ಯರನ್ನಾಗಿ ಮಾಡಿರಿ" ಎಂದು ಇದೆ. ಈ ವಾಕ್ಯದಲ್ಲಿನ ಅಂತರಾರ್ಥವನ್ನು ಗಮನಿಸಿದರೆ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಪುರುಷೋತ್ತಮಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿನ ಅರ್ಥಕ್ಕೆ ಈ ವಾಕ್ಯ ಸರಿಹೋಗುತ್ತಿದೆ. ಹಾಗೆಯೇ ಅಂತಿಮ ದೈವಗ್ರಂಥವಾದ ಪವಿತ್ರ ಖುರ್‌ಆನ್ ಗ್ರಂಥದಲ್ಲಿ 50ನೇ ಸೂರಾದಲ್ಲಿ 21ನೇ ಆಯತ್‌ನಲ್ಲಿನ ಅರ್ಥಕ್ಕೆ ಮೇಲಿನ ವಾಕ್ಯ ಸರಿಹೋಗುತ್ತಿದೆ. ದೇವರು ಹೇಳಿದ ಆದಿಯಲ್ಲಿನ ಜ್ಞಾನವೇ, ಆಕಾಶವಾಣಿ ಜ್ಞಾನವೇ ಮೂರುಕಡೆ, ಮೂರು ಗ್ರಂಥಗಳಾಗಿ ಹೊರಗೆ ಬಂದಿದೆ. ಆದ್ದರಿಂದ ಮೊದಲೇ ನಾವು ಮೂರು ಗ್ರಂಥಗಳೆಂದು ಬರೆದುಕೊಂಡಿದ್ದೇವೆ. ಒಂದೇ ಜ್ಞಾನ ಮೂರು ಗ್ರಂಥಗಳಲ್ಲಿ

ಇದೆಯೆಂಬ ಸೂತ್ರವನ್ನು ಅನುಸರಿಸಿ ಮಧ್ಯ ದೈವಗ್ರಂಥ ಇಂತಹ ಗ್ರಂಥವೆಂದು ತಿಳಿದುಕೊಂಡಿದ್ದೇವೆ. ಒಂದೇ ಜ್ಞಾನವೂ, ಒಂದೇ ಜ್ಞಾನ ವಾಕ್ಯವೂ ಮೂರು ಗ್ರಂಥಗಳಲ್ಲಿ ಕಾಣಿಸುವುದರಿಂದ ಒಂದು ಪ್ರಥಮ ದೈವಗ್ರಂಥವೆಂದು, ಎರಡನೆಯದು ಮಧ್ಯ ದೈವಗ್ರಂಥವೆಂದು, ಮೂರನೆಯದು ಅಂತಿಮ ದೈವಗ್ರಂಥವೆಂದು ಗುರುತಿಸಿದ್ದೇವೆ.

ಇಲ್ಲಿ ಕೆಲವರಿಗೆ ಒಂದು ಪ್ರಶ್ನೆ ಬರಬಹುದು. ಅದೇನೆಂದರೆ! ಭಗವದ್ಗೀತೆಯಲ್ಲಿ ಎಲ್ಲಿಯೂ ಸಹ ಪ್ರಥಮ ದೈವಗ್ರಂಥವೆಂದು ಹೆಸರು ಇಲ್ಲ. ಅಂತಹದರಲ್ಲಿ ಪ್ರಥಮ ದೈವಗ್ರಂಥ ಭಗವದ್ಗೀತೆಯೆಂದು ನೀವು ಹೇಗೆ ಹೇಳುತ್ತಿರುವಿರಿ? ಇಲ್ಲದ ಹೆಸರನ್ನು ನೀವೇಕೆ ಇಟ್ಟಿದ್ದೀರಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಈ ರೀತಿ ಇದೆ. ಖುರ್‌ಆನ್‌ಗೆ ಪ್ರವಕ್ತ ಯಾರೆಂದು ನೋಡಿದರೆ ಮುಹಮ್ಮದ್‌ರವರು ಎಂದು ತಿಳಿದಿದೆ. ಮುಹಮ್ಮದ್ ಪ್ರವಕ್ತರನ್ನು ಕೊನೆಯ ಪ್ರವಕ್ತಯೆಂದು ಖುರ್‌ಆನ್ ಗ್ರಂಥದಲ್ಲಿಯೇ ಹೇಳಿದ್ದಾರೆ. ಹಾಗೆಯೇ ಖುರ್‌ಆನ್ ಗ್ರಂಥವನ್ನು ಸಹ ಅಂತಿಮ ದೈವಗ್ರಂಥ ಎಂದಿದ್ದಾರೆ. ಕೊನೆಯ ಪ್ರವಕ್ತ ಎಂಬವಾಕ್ಯದ ಆಧಾರದಿಂದ ಆ ಪ್ರವಕ್ತ ಮೂಲಕ ಬಂದಿರುವ ಗ್ರಂಥ ಸಹ ಕೊನೆಯ ಗ್ರಂಥವೆನ್ನುವುದು ನಡೆದಿದೆ. ಆ ಲೆಕ್ಕಪ್ರಕಾರ ಖುರ್‌ಆನ್ ಗ್ರಂಥವನ್ನು ಆಧಾರ ಮಾಡಿಕೊಂಡು ನೋಡಿದರೆ, ಎಲ್ಲದಕ್ಕಿಂತ ಮೊದಲು ಹುಟ್ಟಿದ ಆಧ್ಯಾತ್ಮಿಕ ಗ್ರಂಥ ಭಗವದ್ಗೀತೆಯೆಂದು ತಿಳಿದಿದೆ. ಆದ್ದರಿಂದ ಭಗವದ್ಗೀತೆಯನ್ನು ಪ್ರಥಮ ದೈವ ಗ್ರಂಥವಾಗಿ ಹೇಳುತ್ತಿದ್ದೇವೆ. ಖುರ್‌ಆನ್ ಅಂತಿಮ ಗ್ರಂಥವಾದಾಗ 3600 ವರ್ಷಗಳ ಮೊದಲು ಹುಟ್ಟಿದ ಭಗವದ್ಗೀತೆ ಪ್ರಥಮ ಗ್ರಂಥವಾಗಿ ಲೆಕ್ಕಿಸಲ್ಪಡುತ್ತಿದೆ. ಒಂದು ಖುರ್‌ಆನ್ ಗ್ರಂಥವನ್ನು ಅನುಸರಿಸಿ, ಖುರ್‌ಆನ್ ಗ್ರಂಥಕ್ಕೆ ಪ್ರವಕ್ತನಾದ ಮುಹಮ್ಮದ್ ಅವರನ್ನು ಆಧಾರಮಾಡಿಕೊಂಡು ಭಗವದ್ಗೀತೆ ಮೊದಲ ದೈವಗ್ರಂಥವಾದರೆ, ಮಧ್ಯ ಗ್ರಂಥ ಬೈಬಲಾಗಿ ತಿಳಿಯುತ್ತಿದೆ. ಅಂತಿಮ ಗ್ರಂಥವೆಂದು ಒಂದು ಗ್ರಂಥಕ್ಕೆ ಹೆಸರಿಟ್ಟಾಗ ಉಳಿದ ಎರಡು ಗ್ರಂಥಗಳಲ್ಲಿ ಯಾವುದು ಮೊದಲ ಗ್ರಂಥವೋ, ಯಾವುದು ಮಧ್ಯ ಗ್ರಂಥವೋ ಸುಲಭವಾಗಿ ತಿಳಿದಿವೆ.

ದ್ವಾಪರಯುಗದ ಕೊನೆಯಲ್ಲಿ, ಕಲಿಯುಗದ ಆರಂಭದಲ್ಲಿ ಭಗವದ್ಗೀತೆ ಹೊರಬಂದರೆ, ನಂತರ 3000 ವರ್ಷಗಳಿಗೆ ಬೈಬಲ್ ಗ್ರಂಥವು ಹೊರಗೆ ಬಂದಿದೆ. ಆ ನಂತರ 600 ವರ್ಷಗಳಿಗೆ ಖುರ್ಆನ್ ಗ್ರಂಥ ಹೊರಗೆ ಬಂದಿದೆ. ಈ ಮೂರು ಗ್ರಂಥಗಳು ಒಂದೇ ಜ್ಞಾನದಿಂದ ತುಂಬಿಕೊಂಡು ಬಂದಿರುವವೇ ಆಗಿರುವುದರಿಂದ ಪ್ರಥಮ, ಮಧ್ಯ, ಅಂತಿಮ ಗ್ರಂಥಗಳೆಂದು ಹೆಸರು ಇಡಬೇಕಾಗಿ ಬಂದಿದೆ. ಪ್ರಥಮ ದೈವಗ್ರಂಥಕ್ಕೆ, ಅಂತಿಮ ದೈವ ಗ್ರಂಥಕ್ಕೆ ಮಧ್ಯದಲ್ಲಿ 3600 ವರ್ಷಗಳ ಕಾಲ ಕಳೆದುಹೋಗಿದೆ. ಆದರೆ ಇಲ್ಲಿ ಕೆಲವರಿಗೆ ಮತ್ತೊಂದು ಪ್ರಶ್ನೆ ಬರುವುದಕ್ಕೆ ಅವಕಾಶ ಇದೆ. ಅದೇನೆಂದರೆ! ಮೂರೂ ಒಂದೇ ದೇವರ ಜ್ಞಾನಕ್ಕೆ ಸಂಬಂಧಿಸಿದ ಗ್ರಂಥಗಳೆಂದು ನೀವು ಯಾವ ಆಧಾರದಿಂದ ಹೇಳುತ್ತಿದ್ದೀರೆಂದು ಮತ್ತೆ ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ. ಇದಕ್ಕು ಮೊದಲೇ ಹೇಳಿದ್ದೇನೆ. ಬೈಬಲ್‌ನಲ್ಲಿನ ಒಂದು ವಾಕ್ಯದ ಆಧಾರದಿಂದ ಕೊನೆಯ ಖುರ್ಆನ್ ಗ್ರಂಥದಲ್ಲಿಯೂ, ಮೊದಲನೆಯದಾದ ಭಗವದ್ಗೀತೆ ಗ್ರಂಥದಲ್ಲಿಯೂ ಒಂದೇ ಜ್ಞಾನವಿದೆಯೆಂದು ತಿಳಿಯುತ್ತಿದೆ. ಅದು ಹೇಗೆಂದು ವಿವರಿಸಿ ಹೇಳಿದರೆ ಈ ವಿಧವಾಗಿ ಇದೆ ನೋಡಿರಿ.

ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗವೆಂಬ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಹೀಗೆ ಇದೆ.

**16ನೆ ಶ್ಲೋ॥ ದ್ವಾವಿಮೌ ಪುರುಷೌಲೋಕೇ ಕ್ಷರಶ್ಚಾಕ್ಷರ ಏವಚ ।**
**ಕ್ಷರ ಸ್ಸರ್ವಾಣಿ ಭೂತಾನಿ ಕೂಟಸ್ಥೋ ಕ್ಷರ ಉಚ್ಯತೇ॥**

**17ನೆ ಶ್ಲೋ॥ ಉತ್ತಮಃ ಪುರುಷಸ್ ತ್ವನ್ಯಃ ಪರಮಾತ್ಮೇ ತ್ಯುದಾಹೃತಃ।**
**ಯೋಲೋಕತ್ರಯ ಮಾ ವಿಶ್ಯ ಬಿಭರ್ತವ್ಯಯ ಈಶ್ವರಃ ॥**

**16) ಭಾವಾರ್ಥ:–** (ಶರೀರ) ಲೋಕದಲ್ಲಿರುವ ಪುರುಷರಲ್ಲಿ ಎರಡು ವಿಧಗಳ ಪುರುಷರು ಇದ್ದಾರೆ. ಅವರಲ್ಲಿ ಒಬ್ಬನು ಕ್ಷರನಾಗಿದ್ದಾನೆ, ಮತ್ತೊಬ್ಬನು ಅಕ್ಷರನಾಗಿದ್ದಾನೆ. ಸರ್ವಜೀವರಾಶಿಗಳಲ್ಲಿಯೂ ಕ್ಷರನು, ಅಕ್ಷರನು ಇಬ್ಬರೂ ಕೂಟಸ್ಥರಾಗಿ ಇದ್ದಾರೆ.

**17) ಭಾವಾರ್ಥ:-** ಕ್ಷರನು, ಅಕ್ಷರನೆಂಬ ಇಬ್ಬರು ಪುರುಷರಿಗಿಂತ ಉತ್ತಮವಾದ ಪುರುಷನು ಮತ್ತೊಬ್ಬನು ಇದ್ದಾನೆ. ಆತನು ಪರಮಾತ್ಮಯೆಂದು ಕರೆಯಲ್ಪಡುತ್ತಿದ್ದಾನೆ. ಮೂರನೆಯ ಪುರುಷನಾದ ಪರಮಾತ್ಮ ಮುಲ್ಲೋಕಗಳು (ವಿಶ್ವವೆಲ್ಲಾ) ವ್ಯಾಪಿಸಿ, ನಾಶನ ಇಲ್ಲದವನಾಗಿ, ಈಶ್ವರನಾಗಿ ಇದ್ದಾನೆ.

**ವಿವರ :-** ಇಲ್ಲಿ ಒಟ್ಟು ಮೂವರು ಪುರುಷರನ್ನು ಹೇಳುವುದಾಗಿದೆ. ಪುರುಷರೆಂದರೆ ಗಂಡಸರೆಂದು ಅಂದುಕೊಳ್ಳಬಾರದು. ಆತ್ಮವನ್ನು ಪುರುಷನೆಂದು, ಪ್ರಕೃತಿಯನ್ನು ಸ್ತ್ರೀಯೆಂದು ಆಧ್ಯಾತ್ಮಿಕ ವಿದ್ಯೆಯಲ್ಲಿ ಹೇಳುತ್ತಿರುತ್ತಾರೆ. ಆದ್ದರಿಂದ ಮೂರು ಆತ್ಮಗಳನ್ನು ಮೂವರು ಪುರುಷರಾಗಿ ಭಗವದ್ಗೀತೆಯಲ್ಲಿ ಹೇಳುವುದಾಗಿದೆ. ಪ್ರತಿ ಮನುಷ್ಯನಲ್ಲಿ, ಪ್ರತಿ ಜೀವರಾಶಿಯಲ್ಲಿ ಕ್ಷರನೆಂಬ ನಾಶವಾಗುವವನು, ಅಕ್ಷರನೆಂಬ ನಾಶವಾಗದವನು ಇಬ್ಬರು ಪುರುಷರು (ಎರಡು ಆತ್ಮಗಳು) ಇದ್ದಾರೆ. ಯಾವ ಜೀವರಾಶಿಯಲ್ಲಿ ಆದರೂ ಕ್ಷರನು, ಅಕ್ಷರನು ಇಬ್ಬರೂ ಬೆರೆತಿರುತ್ತಾರೆ. ಈ ಎರಡು ಆತ್ಮಗಳನ್ನು ಜೋಡಿ ಆತ್ಮಗಳೆಂದು ಕರೆಯುತ್ತೇವೆ. ಈ ಎರಡು ಆತ್ಮಗಳು (ಇಬ್ಬರು ಪುರುಷರು) ಒಬ್ಬರನ್ನು ಬಿಟ್ಟು ಮತ್ತೊಬ್ಬರು ಇರುವುದಿಲ್ಲ. ಆತ್ಮಯಿಲ್ಲದ ಜೀವಾತ್ಮವಾಗಲಿ, ಜೀವಾತ್ಮಯಿಲ್ಲದ ಆತ್ಮವಾಗಲಿ ಪ್ರಪಂಚದಲ್ಲಿ ಎಲ್ಲಿಯೂ ಇರಲಾರರು. ಸೃಷ್ಠಿ ತಯಾರಾದಾಗಿನಿಂದ ಇಲ್ಲಿಯವರೆಗು ಯಾವ ಶರೀರದಲ್ಲಾಗಲಿ ಜೋಡಿ ಆತ್ಮಗಳು ಹೊರತು ಒಂದು ಆತ್ಮ ಇಲ್ಲವೆಂದು ಹೇಳಬಹುದು. ಶರೀರದಲ್ಲಿ ಜೀವಾತ್ಮವನ್ನು ಆಧಾರಮಾಡಿಕೊಂಡು ಆತ್ಮ ಇರುವಾಗ, ಆತ್ಮ ಇದ್ದರೇನೆ ಜೀವಿಯು ಶರೀರದಲ್ಲಿ ಬದುಕುತ್ತಿದ್ದಾನೆ. ಆದ್ದರಿಂದ ಈ ಎರಡು ಆತ್ಮಗಳನ್ನು ಕೂಟಸ್ಥ ಆತ್ಮಗಳೆಂದಿದ್ದಾರೆ. ಮರಣದಲ್ಲಿ ಆತ್ಮ ಹಿಂದೆ ಜೀವಾತ್ಮ ಶರೀರವನ್ನು ಬಿಟ್ಟುಹೋಗುತ್ತಿದೆ. ಹುಟ್ಟಿನಲ್ಲಿ ಆತ್ಮ ಹಿಂದೆ ಜೀವಾತ್ಮ ಬರುತ್ತಿದೆ. ಸಾವು ಹುಟ್ಟುಗಳಲ್ಲಿಯೇ ಅಲ್ಲದೆ ಜೀವನದಲ್ಲಿ ಸಹ ಕ್ಷರ, ಅಕ್ಷರ ಆತ್ಮಗಳು ಒಂದನ್ನೊಂದು ಬಿಟ್ಟು ಇರಲಾರವು. ಈ ವಿವರ ಒಂದು ಮನುಷ್ಯರಲ್ಲಿಯೇ ಅಲ್ಲದೆ, ಸರ್ವಜೀರಾಶಿಗಳಲ್ಲಿ ಹಾಗೆಯೇ ಇದೆ. ಇದು ಭಗವದ್ಗೀತೆಯಲ್ಲಿ ಅತಿ ಮುಖ್ಯವಾದ ಆತ್ಮಗಳ ವಿಷಯವೆಂದು ತಿಳಿಯಬೇಕು. ಶರೀರದಲ್ಲಿ ಕ್ಷರ, ಅಕ್ಷರ ಎಂಬ ಈ ಎರಡು ಆತ್ಮಗಳೇ ಅಲ್ಲದೆ

ಮತ್ತೊಂದು ಆತ್ಮ ಸಹ ಇದೆ. ಮೂರನೆಯ ಆತ್ಮ ಕ್ಷರ, ಅಕ್ಷರ ಪುರುಷರಿಗಿಂತ ಬೇರೆಯಾಗಿ ಅವರೊಂದಿಗೆ ಬೆರೆಯದಂತಿದೆ. ಶರೀರದಲ್ಲಿ ಎರಡು (ಜೋಡಿ) ಆತ್ಮಗಳಿಗಿಂತ ಬೇರೆಯಾಗಿರುವ ಮೂರನೆಯ ಆತ್ಮವನ್ನು ಅಥವಾ ಮೂರನೇ ಪುರುಷನನ್ನು ಪುರುಷೋತ್ತಮನು ಎನ್ನುತ್ತಿದ್ದಾರೆ. ಕ್ಷರನು, ಅಕ್ಷರನು ಎಂಬ ಇಬ್ಬರು ಪುರುಷರಿಗಿಂತ ಮೂರನೆಯ ಪುರುಷನು ಉತ್ತಮವಾದವನು ಆಗಿರುವುದರಿಂದ ಮೂರನೆಯ ಪುರುಷನನ್ನು ಪುರುಷೋತ್ತಮನೆಂದು ಪ್ರತ್ಯೇಕವಾಗಿ ಕರೆಯುತ್ತಿದ್ದಾರೆ. ಪುರುಷೋತ್ತಮನಾದ ಮೂರನೆಯ ಪುರುಷನನ್ನೇ ಪರಮಾತ್ಮಯೆಂದು ಸಹ ಕರೆಯುತ್ತಿದ್ದೇವೆ. ಪರಮಾತ್ಮನಾದ ಮೂರನೆಯ ಪುರುಷನು ಇಲ್ಲವೆ ಮೂರನೇ ಆತ್ಮ ನಾಶವಿಲ್ಲದಿರುವುದಾಗಿ ಪ್ರಪಂಚವೆಲ್ಲಾ ವ್ಯಾಪಿಸಿ ಎಲ್ಲವುಗಳಿಗೂ ಸರ್ವಜೀವರಾಶಿಗಳಿಗೂ ಅಧಿಪತಿಯಾಗಿ, ದೇವರಾಗಿ ಇದೆ. ಮೂರನೆಯ ಪುರುಷನು ಎಲ್ಲಾಕಡೆ ವ್ಯಾಪಿಸಿದವನಾಗಿ ದೇವರಾಗಿ ಇರುವಾಗ, ಕ್ಷರನು ಅಕ್ಷರನು ಎಂಬ ಎರಡು ಆತ್ಮಗಳು ಒಂದು ಶರೀರದಲ್ಲಿದ್ದು ಕ್ಷರನು ಕರ್ಮವನ್ನು ಅನುಭವಿಸುತ್ತಿರುವಾಗ, ಅಕ್ಷರನು ಕರ್ಮವನ್ನು ಅನುಭವಿಸುವಂತೆ ಮಾಡುತ್ತಿದ್ದಾನೆ.

ಕ್ಷರನು ಎನ್ನುವವನು ಶರೀರದಲ್ಲಿ ಜೀವಾತ್ಮನಾಗಿ ಕರೆಯಲ್ಪಡುತ್ತಿದ್ದಾನೆ. ಅಕ್ಷರನು ಎಂಬುವವನು ಶರೀರದಲ್ಲಿನ ಆತ್ಮನಾಗಿ ಕರೆಯಲ್ಪಡುತ್ತಿದ್ದಾನೆ. ಕ್ಷರನು, ಅಕ್ಷರನು ಇಲ್ಲವೆ ಜೀವಾತ್ಮ, ಆತ್ಮ ಎನ್ನುವ ಎರಡನ್ನು ಪರಮಾತ್ಮಯೆಂಬ ಮೂರನೆಯ ಪುರುಷನು ಸಾಕ್ಷಿಯಾಗಿ ನೋಡುತ್ತಿದ್ದಾನೆ. ಮೂರನೆಯ ಪುರುಷನು ಶರೀರದಲ್ಲಿ ಏನು ನಡೆದರೂ ಸಾಕ್ಷಿಯಾಗಿ ನೋಡುತ್ತಿದ್ದಾನೆ. ಮೂರನೆಯವನು ನೋಡುತ್ತಾ ಇದ್ದರೆ, ಒಂದನೆಯವನಾದ ಕ್ಷರನು ಅಥವಾ ಜೀವಿಯು ಒಂದು ವಿಷಯದಲ್ಲಿ ಅಳುತ್ತಿದ್ದರೆ, ಎರಡನೆಯುವನಾದ ಅಕ್ಷರ ಪುರುಷನು ಮೊದಲನೆಯವನನ್ನು ಆಳಿಸುತ್ತಿದ್ದಾನೆ. ಎಂದರೆ ಯಾರ ಕರ್ಮವನ್ನು ಅನುಸರಿಸಿ ಆ ಶರೀರದಲ್ಲಿನ ಎರಡನೆ ಆತ್ಮ ಕೆಲಸಮಾಡುತ್ತಿದೆ. ವಿವರವಾಗಿ ಹೇಳಿಕೊಂಡರೆ ಶರೀರದಲ್ಲಿನ ಜೀವಾತ್ಮ ಬಲಹೀನವಾದುದಾಗಿ, ಏನು ಮಾಡಲಾರದೆ ಇದ್ದರೆ, ಅದೇ ಶರೀರದಲ್ಲಿನ ಆತ್ಮ ಬಲವಿರುವುದಾಗಿದ್ದು ಎಲ್ಲಾ ಕೆಲಸಗಳೂ ಮಾಡುತ್ತಿದೆ.

ಅದೇ ಶರೀರದಲ್ಲಿ ಒಳಗೂ, ಹೊರಗೂ ಎರಡು ಜಾಗಗಳಲ್ಲಿರುವ ಪರಮಾತ್ಮಯೆಂಬ ಮೂರನೇ ಆತ್ಮ ಶರೀರದಲ್ಲಿನ ಎರಡು ಆತ್ಮಗಳಿಗು ಸಾಕ್ಷಿಯಾಗಿದ್ದೂ, ಎರಡು ಆತ್ಮಗಳಿಗೂ ಅಧಿಪತಿಯಾಗಿ ದೇವರಾಗಿದೆ. ಶರೀರದಲ್ಲಿನ ಕ್ಷರಾಕ್ಷರ ಎರಡು ಆತ್ಮಗಳು ಆಡಿಸುವುದು, ಆಡುವುದಾಗಿದ್ದು ಪ್ರಪಂಚವನ್ನು ನಡೆಸುತ್ತಿರುವಾಗ ಮೂರನೆಯ ಆತ್ಮ ಕೇವಲ ನೋಡುವುದಾಗಿದ್ದು ಹೆದರದೆ, ಮಾತನಾಡದೆ, ಕದಲದೆ, ನಡೆಯದೆ ಇದೆ.

ಶರೀರದಲ್ಲಿನ ಎರಡು ಆತ್ಮಗಳಲ್ಲಿ ಮೊದಲನೆಯದಾದ ಜೀವಿಯು ಅಥವಾ ಜೀವಾತ್ಮಯೆಂಬುವವನನ್ನು ಅವನ ಕರ್ಮವನ್ನನುಸರಿಸಿ ಎರಡನೆ ಆತ್ಮವಾದ ಆತ್ಮ ಆಡಿಸುತ್ತಿದೆ ಇಲ್ಲವೆ ನಡೆಸುತ್ತಿದೆ. ಮೂರನೆಯವನು ನೋಡುತ್ತಾ ಏನು ಸಂಬಂಧವಿಲ್ಲದೆ ಇದ್ದಾನೆ. ಶರೀರದಲ್ಲಿ ಎಲ್ಲಾ ಕೆಲಸಗಳು ಮಾಡುವ ಆತ್ಮ ಸ್ತ್ರೀ ಶರೀರದಲ್ಲಿ ಗರ್ಭ ನಿಲ್ಲುವಂತೆ ಮಾಡಿ, ಸಂತತಿಯನ್ನು ಉಂಟುಮಾಡುತ್ತಿದೆ. ಸಂತತಿ ವಿಷಯದಲ್ಲಾಗಲಿ, ಮತ್ತು ಯಾವ ಇತರ ವಿಷಯಗಳಲ್ಲಾಗಲಿ, ಜೀವಿಗೆ ಸಂಬಂಧ ಇಲ್ಲ. ಆದ್ದರಿಂದ ಸ್ತ್ರೀ ಗರ್ಭದಲ್ಲಿ ಹುಟ್ಟಿದ ಮಗುವಿಗೆ ಅದೇ ಶರೀರದಲ್ಲಿರುವ ಆತ್ಮವೇ ತಂದೆಯೆಂದು ಹೇಳಬಹುದು. ವಾಸ್ತವವಾಗಿ ಜೀವಾತ್ಮ ಯಾವ ಸಂತತಿಗೆ ತಂದೆಯಲ್ಲ. ಒಬ್ಬ ಮನುಷ್ಯನಲ್ಲಿನ ಜೀವಿಯು ತನ್ನ ಹೆಂಡತಿಗೆ ಹುಟ್ಟಿದ ಮಗುವಿಗೆ ತಾನೇ ತಂದೆಯೆಂದು ಅಂದುಕೊಳ್ಳುವುದು ಸಹಜವೆ. ಆದರೆ ನಿಜಕ್ಕೆ ಆತನಿಗೆ ತನ್ನ ಸಂತತಿ ಅಂದುಕೊಳ್ಳುವವರು ಯಾರೂ ತನಗೆ ಮಕ್ಕಳು ಅಲ್ಲವೆಂದು ತನಗೆ ತಿಳಿದಿಲ್ಲ. **ಪ್ರತಿ ಮಗುವಿಗು ತಂದೆ ನಮಗೆ ತಿಳಿದರೂ ತಿಳಿಯದಿದ್ದರೂ ಶರೀರದಲ್ಲಿನ ಆತ್ಮವೆ.** ಈ ಮಾತನ್ನು ಜೀರ್ಣಿಸಿಕೊಳ್ಳುವುದಕ್ಕೆ ಸ್ವಲ್ಪ ಕಷ್ಟವಾಗಿದ್ದರೂ ನಾವು ಹೇಳುವಮಾತು ನೂರಕ್ಕೆ ನೂರರಷ್ಟು ನಿಜ. ಆದ್ದರಿಂದ ಮೂರು ಗ್ರಂಥಗಳಲ್ಲಿ ಒಂದು ಗ್ರಂಥದಲ್ಲಿ **"ಹೊರಗೆ ಕಾಣಿಸುವವರು ಯಾರೂ ನಿನ್ನ ತಂದೆಯಲ್ಲ, ತಂದೆಯೆಂದು ಹೆಸರಿಟ್ಟು ಯಾರನ್ನು ಕರೆಯಬೇಡ. ನಿನ್ನ ತಂದೆ ಪರಲೋಕದಲ್ಲಿದ್ದಾನೆ"** ಎಂದು ಹೇಳಿದ್ದಾರೆ. ಆ ವಾಕ್ಯವನ್ನು ಅರ್ಥಮಾಡಿ

ಕೊಂಡರೆ ಅದರಲ್ಲಿ ವಿಶೇಷವಾದ ಜ್ಞಾನವಿದೆ. ಆ ಲೆಕ್ಕಪ್ರಕಾರ ಮತ್ತು ಮೂರು ಗ್ರಂಥಗಳಲ್ಲಿ ಹೇಳಿದ ಜ್ಞಾನದ ಪ್ರಕಾರ ಪ್ರತಿ ಮನುಷ್ಯನಿಗು ಕಾಣಿಸುವವನು ತಂದೆಯಲ್ಲ ಎಂದು ಅರ್ಥವಾಗುತ್ತಿದೆ. ನಾವು **"ಹೇತುವಾದ–ಪ್ರತಿವಾದ"** ಎಂಬ ಗ್ರಂಥದಲ್ಲಿ ತಂದೆ ವೀರ್ಯಕಣದಿಂದಲೇ ಎಲ್ಲರೂ ಹುಟ್ಟಲಿಲ್ಲವೆಂದು, ವೀರ್ಯಕಣದೊಂದಿಗೆ ಸಂಬಂಧವಿಲ್ಲದೆ ಬಹಳಜನ ಹುಟ್ಟುತ್ತಿದ್ದಾರೆಂದು ಹೇಳಿದ್ದೇವೆ. ನಾವು ಹೇಳಿದ ನಂತರ ಒಂದು ತಿಂಗಳಿಗೆ ಅದೇ ವಿಷಯವನ್ನು ಪರಿಶೋಧನೆಯಲ್ಲಿ ಕಂಡುಕೊಂಡಂತೆ ಅಮೇರಿಕಾ ಶಾಸ್ತ್ರಜ್ಞರು ಪ್ರಕಟಿಸುವುದು ಸಹ ನಡೆದಿದೆ. ಇದರಿಂದ ವೀರ್ಯಕಣ ಸಂಬಂಧ ಇಲ್ಲದೆ ಮಕ್ಕಳು ಹುಟ್ಟುತ್ತಾರೆಂಬ ವಿಷಯ ಶಾಸ್ತ್ರಬದ್ಧವಾದಂತೆ ತಿಳಿಯುತ್ತಿದೆ.

ಭಗವದ್ಗೀತೆಯಲ್ಲಿ ಹೇಳಿದ ಮೂವರು ಪುರುಷರು ಇಲ್ಲವೆ ಮೂರು ಆತ್ಮಗಳ ವಿಷಯ ಈ ವಿಧವಾಗಿದೆಯೆಂದು ಹೇಳಿದರೂ ಈಗ ನಾವು ಹೇಳುವುದು ಬಹಳ ಸ್ವಲ್ಪವೇ ಎಂದು ಹೇಳಬಹುದು. ಮೂರು ಆತ್ಮಗಳನ್ನು ತಿಳಿದುಕೊಂಡಂತೆಲ್ಲ ಎಷ್ಟೋ ವಿಷಯಗಳು ತಿಳಿಯುತ್ತವೆ. ಮೂರು ಆತ್ಮಗಳಲ್ಲಿ ಮೊದಲ ಜೀವಾತ್ಮ, ಕೊನೆಯ ಪರಮಾತ್ಮ ಕೆಲಸ ಮಾಡದಂತೆ ಇರುವಾಗ ಮಧ್ಯದಲ್ಲಿನ ಆತ್ಮವೇ ಸಮಸ್ತ ಕಾರ್ಯಗಳನ್ನು ಮಾಡುತ್ತಿದೆ. ಕರ್ತನಾಗಿ ಪರಮಾತ್ಮ, ಕರ್ಮವಾಗಿ ಜೀವಾತ್ಮ, ಕ್ರಿಯೆಯಾಗಿ ಆತ್ಮ ಇದೆಯೆಂದು ಹೇಳಬಹುದು. ಇಲ್ಲಿಯವರೆಗು ಭಗವದ್ಗೀತೆಯಲ್ಲಿನ ವಿಷಯವನ್ನು ಹೇಳಿದ್ದೇನೆ. ಇನ್ನು ಅಂತಿಮ ದೈವಗ್ರಂಥವಾದ ಖುರ್‌ಆನ್‌ನಲ್ಲಿ ಈ ಮೂರು ಆತ್ಮಗಳನ್ನು ಕುರಿತು ತಿಳಿಸಿದ ವಿಷಯವನ್ನು ವಿವರಿಸುತ್ತೇವೆ ನೋಡಿರಿ. **ಖುರ್‌ಆನ್ ಗ್ರಂಥದಲ್ಲಿ 50ನೇ ಸೂರಾದಲ್ಲಿ 21ನೇ ಆಯತ್‌ನಲ್ಲಿ (1) "ಪ್ರತಿ ವ್ಯಕ್ತಿ ತನ್ನನ್ನು ತೆಗೆದುಕೊಂಡು ಬರುವವನು ಒಬ್ಬನು, ಸಾಕ್ಷಿಕೊಡುವವನು ಒಬ್ಬನು ಇರುವ ಸ್ಥಿತಿಯಲ್ಲಿ ಬರುತ್ತಾನೆ"** ಎಂದು ಇದೆ. ಇದೇ ವಾಕ್ಯವನ್ನೇ ಮತ್ತೊಂದು ಖುರಾನ್ ಗ್ರಂಥದಲ್ಲಿ ಈ ವಿಧವಾಗಿ ಅನುವಾದಿಸಿದ್ದಾರೆ ನೋಡಿರಿ. **(2) ಪ್ರತಿ ಪ್ರಾಣಿ ಇಲ್ಲವೆ ಪ್ರತಿ ಜೀವಿ ಒಬ್ಬ ನಡೆಸುವವನೊಂದಿಗೆ, ಮತ್ತೊಂದು ಸಾಕ್ಷಿಕೊಡುವವನೊಂದಿಗೆ ಸಹ ಬರುತ್ತದೆ"**

ಎಂದು ಇದೆ. ಮತ್ತೊಂದು ಖುರ್‌ಆನ್ ಗ್ರಂಥದಲ್ಲಿ ಹೀಗೆ ಇದೆ. (3) **ಪ್ರತಿ ವ್ಯಕ್ತಿ ತನ್ನಹಿಂದೆ ಒಬ್ಬ ನಡೆಸುವವನು, ಮತ್ತೊಂದು ಸಾಕ್ಷಿಕೊಡುವವನು ಇರುವ ಸ್ಥಿತಿಯಲ್ಲಿ ಬರುತ್ತಾನೆ"** ಈ ವಿಧವಾಗಿ ಮೂರು ಖುರ್‌ಆನ್ ಗ್ರಂಥಗಳಲ್ಲಿ ಈ ವಾಕ್ಯವನ್ನು ಕನ್ನಡ ಭಾಷೆಯೊಳಗೆ ಅನುವಾದಿಸಿ ಬರೆಯುತ್ತಿದ್ದಾರೆ. ಮೂರು ವಾಕ್ಯಗಳನ್ನು ಯಾವಕಡೆ ನೋಡಿದರೂ ಮೂರು ಒಂದೇ ಅರ್ಥವನ್ನು ಕೊಡುತ್ತಿವೆ. ಪ್ರತಿ ಮನುಷ್ಯನನ್ನು ಇಲ್ಲವೆ ಪ್ರತಿ ಜೀವಿಯನ್ನು ದೂಡುವವನು ಒಬ್ಬನಿದ್ದಾನೆ. ಅವನನ್ನೇ ದೂಡುವವನು ಇಲ್ಲವೆ ನಡೆಸುವವನು ಎಂದು ಮೇಲಿನ ವಾಕ್ಯಗಳಲ್ಲಿ ಹೇಳಿದ್ದಾರೆ. ಪ್ರತಿ ಜೀವಿಯನ್ನು ನಡೆಸುವವನು ಆತ್ಮಯೆಂದು, ನಡೆಸಲ್ಪಡುವವನು ಇಲ್ಲವೆ ದೂಡಲ್ಪಡುವವನು ಜೀವಾತ್ಮಯೆಂದು ತಿಳಿಯಬೇಕು. ಮೂರನೆಯವನು ಸಾಕ್ಷಿಯಾಗಿ ಇರುವವನು ದೇವರೇ ಎಂದು ಎಲ್ಲರಿಗೂ ತಿಳಿದಿದೆ. ನಡೆಸಲ್ಪಡುವವನು ಜೀವಾತ್ಮಯೆಂದು, ನಡೆಸುವವನು ಆತ್ಮಯೆಂದು, ನೋಡುತ್ತಾ ಸುಮ್ಮನಿರುವವನು ಪರಮಾತ್ಮಯೆಂದು ಭಗವದ್ಗೀತೆ ಗ್ರಂಥದಲ್ಲಿನ ವಿಷಯವನ್ನು ಹೇಳಿಕೊಂಡಿದ್ದೇವೆ. ಇನ್ನೂ ವಿವರವಾಗಿ ಹೇಳಿಕೊಂಡರೆ ಪ್ರಥಮ ಗ್ರಂಥ ಭಗವದ್ಗೀತೆಯಲ್ಲಿಯೂ, ಅಂತಿಮ ಗ್ರಂಥ ಖುರ್‌ಆನ್‌ನಲ್ಲಿ ಒಂದೇ ಜ್ಞಾನವಿದೆ ಎಂಬುದಕ್ಕೆ ಸಾಕ್ಷಿಯಾಗಿ ಈ ಮೂರು ಆತ್ಮಗಳ ವಿಷಯ ಎರಡು ಗ್ರಂಥಗಳಲ್ಲಿಯೂ ಒಂದೇ ವಿಧವಾಗಿ ಇದೆ.

ಕ್ಷರನು, ಅಕ್ಷರನು, ಪುರುಷೋತ್ತಮನು ಎಂದು ಮೂವರು ಪುರುಷರಾಗಿ ಭಗವದ್ಗೀತೆಯಲ್ಲಿ ಹೇಳಿದವರೇ ಖುರ್‌ಆನ್ ಗ್ರಂಥದಲ್ಲಿ ನಡೆಯಲ್ಪಡುವವನು ಕ್ಷರನು, ನಡೆಸುವವನು ಅಕ್ಷರನು, ಸಾಕ್ಷಿಯಾಗಿರುವವನು ಪುರುಷೋತ್ತಮನು ಇಲ್ಲವೆ ಪರಮಾತ್ಮ ಎಂದು ತಿಳಿದುಹೋಗಿದೆ. ಖುರ್‌ಆನ್‌ನಲ್ಲಿ ಜೀವಾತ್ಮ, ಆತ್ಮ, ಪರಮಾತ್ಮರ ವಿಷಯವನ್ನು ಹೇಳುತ್ತಾ ಅವರ ಪಾತ್ರಗಳಿಂದ ಸಹ ಚಿಕ್ಕ ವಾಕ್ಯಗಳಲ್ಲಿ ಹೇಳುವುದು ನಡೆದಿದೆ. ಜೀವಾತ್ಮ ಸ್ವತಃವಾಗಿ ಏನು ಮಾಡುವವನು ಅಲ್ಲ, ಆತ್ಮ ಮಾಡಿಸಿದರೆ ಮಾಡುವವನೇ ಎಂದು, ಯಾವಾಗಲೂ ಆತ್ಮ ಅಧೀನದಲ್ಲಿ ಜೀವಾತ್ಮ ಇರುವವನೆಂದು ತಿಳಿಯುವಹಾಗೆ ಜೀವಾತ್ಮ ಎಂದಿಗೂ ನಡೆಸಲ್ಪಡುವವನೇ ಎಂದು, ಆತ್ಮ ಎಂದಿಗೂ ನಡೆಸುವವನೇ ಎಂದು, ಪರಮಾತ್ಮ

(ದೇವರು) ಎಂದಿಗೂ ಸಾಕ್ಷಿಯಾಗಿ ನೋಡುತ್ತಿರುವವನೇ ಎಂದು ಖುರ್‌ಆನ್ ಗ್ರಂಥದಲ್ಲಿ ಮೂರು ಆತ್ಮಗಳನ್ನು ಕುರಿತು **50ನೇ ಸೂರಾದಲ್ಲಿನ 21ನೇ ವಾಕ್ಯವನ್ನು ಹೇಳಿದ್ದಾರೆ. ಆಧ್ಯಾತ್ಮಿಕರಂಗದಲ್ಲಿ ಆತ್ಮಗಳ ವಿಷಯವೇ ಅತ್ಯಂತ ಮುಖ್ಯವಾದುದು.** ಅತಿ ಮುಖ್ಯವಾದ ಆತ್ಮಗಳ ವಿಷಯವನ್ನು **ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗವೆಂಬ 15ನೇ ಅಧ್ಯಾಯದಲ್ಲಿ 16, 17 ಶ್ಲೋಕಗಳಲ್ಲಿ ಹೇಳಿದಾಗ,** ಅದೇ ವಿಷಯವನ್ನೇ ಖುರ್‌ಆನ್ ಗ್ರಂಥದಲ್ಲಿ 50ನೇ ಸೂರಾ, 21ನೇ ಆಯತ್‌ನಲ್ಲಿ ಹೇಳುವುದಾಗಿದೆ. ಆದರೆ ಈ ವಿಷಯವನ್ನು ನಾವು ಹೇಳಿದ ನಂತರ ಯಾರಿಗಾದರೂ ಅರ್ಥವಾಗುತ್ತದೇನೋ ಆದರೆ, ಸರ್ವಸಾಧಾರಣವಾಗಿ ಓದುವವರಿಗೆ ಎರಡು ಗ್ರಂಥದಲ್ಲಿನ ಮೇಲಿನ ಎರಡು ವಾಕ್ಯಗಳು ಒಂದರೊಂದಿಗೆ ಮತ್ತೊಂದು ಸಂಬಂಧವಾಗಿ ಇವೆಯೆಂದು ತಿಳಿಯುವುದಿಲ್ಲ. ಗೀತೆಯಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮನು ಎಂದು ಹೇಳಲ್ಪಟ್ಟ ಮೂರು ಆತ್ಮಗಳೇ ಖುರ್‌ಆನ್‌ನಲ್ಲಿ ಮೂವರಾಗಿ ಹೇಳಿದರೂ ಯಾರೂ ಗುರುತಿಸಲಾರದಂತೆ ಇವೆ. ಅದೇ ಕೆಲಸವಾಗಿ ತೀವ್ರವಾಗಿ ನೋಡುವವರಿಗೇ ಎರಡು ಗ್ರಂಥಗಳಲ್ಲಿನ ಎರಡು ವಾಕ್ಯಗಳು ಒಂದೇ ಜ್ಞಾನವೆಂದು ತಿಳಿಯಬಲ್ಲದು. ದೇವರು ಜ್ಞಾನವಿರುವವರಿಗೆ, ಗುರುತಿಸುವವರಿಗೇ ಸುಲಭವಾಗಿ ಅರ್ಥವಾಗುವಂತೆ, ಜ್ಞಾನ ಇಲ್ಲದವರಿಗೆ, ದೇವರ ಮೇಲೆ ಶ್ರದ್ಧೆ ಇಲ್ಲದವರಿಗೆ, ದೇವರ ವಿಷಯಗಳಿಗೆ ಪ್ರಾಧಾನ್ಯತೆ ಕೊಡದವರಿಗೆ ಅರ್ಥವಾಗದ ವಿಧದಲ್ಲಿ ಎರಡು ವಾಕ್ಯಗಳು ಬೇರೆಬೇರೆ ಬಣ್ಣಬಳಿದು ಇಟ್ಟಂತೆ ಇವೆ.

ಪ್ರಥಮ, ಅಂತಿಮ ಗ್ರಂಥಗಳಲ್ಲಿ ಒಂದೇ ಆತ್ಮಗಳ ವಿಷಯ ಬೇರೆಬೇರೆ ವಾಕ್ಯಗಳಲ್ಲಿ ಗುರುತಿಸಲ್ಪಡುವಂತೆ ಇದೆಯೆಂದು, ಶ್ರದ್ಧೆ, ಬುದ್ಧಿ ಇರುವವರಿಗೆ ಮಾತ್ರವೇ ಆ ಎರಡು ವಾಕ್ಯಗಳು ಒಂದೇ ಜ್ಞಾನವನ್ನು ಬೋಧಿಸುತ್ತಿವೆಂದು ತಿಳಿಯುತ್ತದೆಂದು ಹೇಳುತ್ತಿದ್ದೇವೆ. ಅಷ್ಟೇ ಅಲ್ಲದೆ ಮಧ್ಯ ಗ್ರಂಥವನ್ನು ಸಹ ಆತ್ಮಗಳ ವಿಷಯವನ್ನು ತಿಳಿಸುವ ವಾಕ್ಯವನ್ನು ಆಧಾರ ಮಾಡಿಕೊಂಡು ಆ ಗ್ರಂಥ ಇಂತಹ ಗ್ರಂಥವೆಂದು ತಿಳಿದುಕೊಂಡಿದ್ದೇವೆ. ಮಧ್ಯ ಗ್ರಂಥದಲ್ಲಿನ ವಾಕ್ಯವನ್ನು ನೋಡಿದರೆ ಜ್ಞಾನ ಇರುವವನಿಗೆ ಇದು ಮೂರು ಆತ್ಮಗಳ

ವಿಷಯವೆಂದು ಸುಲಭವಾಗಿ ಅರ್ಥವಾಗುತ್ತದೆ. ಜ್ಞಾನ ಇಲ್ಲದವರಿಗೆ ಅಲ್ಲಿನ ವಾಕ್ಯ ಸ್ವಲ್ಪವೂ ಹೊರಬೀಳದಂತೆ, ಇದು ಮೂವರು ಪುರುಷರನ್ನು ಕುರಿತು ಹೇಳಿರುವುದೇನಾ! ಎಂದು ಅನುಮಾನ ಉಂಟುಮಾಡುತ್ತದೆ. ಪ್ರಥಮ ಗ್ರಂಥದಲ್ಲಿ ಐದುಸಾವಿರ ವರ್ಷಗಳ ಪೂರ್ವದಲ್ಲಿ ಹೇಳಿದ ಭಗವದ್ಗೀತೆ ಗ್ರಂಥದಲ್ಲಿ ಕ್ಷರನು, ಅಕ್ಷರನು, ಪುರುಷೋತ್ತಮನು ಎಂದೂ ಜೀವಾತ್ಮ, ಆತ್ಮ, ಪರಮಾತ್ಮ ಎಂದೂ ಹೇಳಲ್ಪಟ್ಟ ವಾಕ್ಯ ನಡೆಸಲ್ಪಡುವವನು, ನಡೆಸುವವನು, ನೋಡುವವನು ಎಂದು ಮಾರುವೇಷದಲ್ಲಿ 1400 ವರ್ಷಗಳ ಕೆಳಗೆ ಹೇಳಲ್ಪಟ್ಟ ಖುರ್‌ಆನ್ ಗ್ರಂಥದಲ್ಲಿ ಬರೆಯುವುದು ನಡೆದಿದೆ. ಅದೇ ಮೂರು ಆತ್ಮಗಳ ವಿಷಯವನ್ನೇ 2000 ವರ್ಷಗಳ ಕೆಳಗೆ ಹೇಳಿದ ಬೈಬಲ್ ಗ್ರಂಥದಲ್ಲಿ ಯಾರೂ ಸುಲಭವಾಗಿ ಗುರುತಿಸದಹಾಗೆ, ಬಟ್ಟೆಯನ್ನು ಸುತ್ತಿ ಕಾಣಿಸದಹಾಗೆ ಮಾಡಿ ಹೇಳಿದಂತಿದೆ. ಖುರ್‌ಆನಲ್ಲಿನ ಗೀತೆಯಲ್ಲಿನ ವಾಕ್ಯವನ್ನು ಮಾರು ವೇಷದಲ್ಲಿ ಹೇಳಿದ್ದರೆ, ಬೈಬಲ್ ಪೂರ್ತಿ ಮುಸುಗುಹಾಕಿ ಹೇಳಿದಹಾಗಿದೆ. ಬೈಬಲ್ ಗ್ರಂಥದಲ್ಲಿನ ವಾಕ್ಯಕ್ಕೆ ಮುಸುಗು ತೆಗೆದು ನೋಡಿದರೆ ಅದು ಭಗವದ್ಗೀತೆಯಲ್ಲಿನ ಮೂವರು ಪುರುಷರ ವಾಕ್ಯವೆಂದು ತಿಳಿಯಬಲ್ಲದು. ಹಾಗೆಯೇ ಖುರ್‌ಆನ್‌ನಲ್ಲಿನ ವಾಕ್ಯ ವೇಷ ತೆಗೆದು ನೋಡಿದರೆ ಇದು ಭಗವದ್ಗೀತೆಯಲ್ಲಿನ ಮೂರು ಆತ್ಮಗಳ ವಿಷಯವೆಂದು ತಿಳಿಯಬಲ್ಲದು. ಒಂದೇ ಜ್ಞಾನ ಮೂರು ಗ್ರಂಥಗಳಲ್ಲಿ, ಮೂರು ವಿಧಗಳಾಗಿದೆ ಎಂಬ ವಿಷಯ ಯಾರಿಗೂ ತಿಳಿಯದೆ ಹೋಗಿರುವುದರಿಂದ ಮನುಷ್ಯರಲ್ಲಿ ಮತಗಳ ಮಾಯೆ ಪೂರ್ತಿ ತುಂಬಿಹೋಗಿ ದೇವರಾಗಲಿ, ದೇವರ ಜ್ಞಾನವಾಗಲಿ ಯಾರಿಗೂ ಗುರುತಿಸಲ್ಪಡದಹಾಗೆ ಹೋಗಿದೆ. ಮೂರು ಆತ್ಮಗಳ ವಿಷಯ ಬೈಬಲ್‌ನಲ್ಲಿ ಯಾವ ವಿಧವಾಗಿದೆಯೋ ಹೇಗೆ ತಿಳಿಯದಂತೆ ಇದೆಯೋ ಈಗ ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

ಮೂರು ಆತ್ಮಗಳ ವಿಷಯವನ್ನು ನೋಡಿ ಬೈಬಲನ್ನು ಮಧ್ಯ ದೈವಗ್ರಂಥವಾಗಿ ತಿಳಿದುಕೊಂಡಿದ್ದೇವೆ. ಬೈಬಲ್‌ನಲ್ಲಿ ಮೂರು ಆತ್ಮಗಳ ವಿಷಯ ಭಗವದ್ಗೀತೆಗಿಂತ, ಖುರ್‌ಆನ್‌ಗಿಂತ ಭಿನ್ನವಾಗಿ ಹೇಳಲ್ಪಟ್ಟಿರುವುದರಿಂದ ಅದನ್ನು

ಓದಿದವರ್‍ಯಾರೂ ಇದು ಭಗವದ್ಗೀತೆಯಲ್ಲಿ ಹೇಳಿದ ಕ್ಷರ, ಅಕ್ಷರ, ಪುರುಷೋತ್ತಮ ಎಂಬ ಮೂರು ಆತ್ಮಗಳ ವಿಷಯವೆಂದು ಗ್ರಹಿಸಲಾರರು. ಮತ್ತಾಯ ಸುವಾರ್ತೆ 28ನೇ ಅಧ್ಯಾಯುದಲ್ಲಿ 19ನೇ ವಚನದಲ್ಲಿ ತಂದೆ, ಕುವಾರನು, ಪರಿಶುದ್ಧಾತ್ಮಯೆಂದು ಹೇಳಿ ಇವರ ನಾಮದಲ್ಲಿ ಬಾಪ್ತಿಸ್ಮಕೊಟ್ಟು ಸರ್ವಜನರನ್ನು ಶಿಷ್ಯರನ್ನಾಗಿ ಮಾಡಿರಿ ಎಂದು ಇದೆ. ಬಾಪ್ತಿಸ್ಮ ಎಂದರೆ ಉಪದೇಶ ಎಂದು ಅರ್ಥ. ಉಪದೇಶಕೊಟ್ಟರೆ ಶಿಷ್ಯರಾಗಿ ಬದಲಾಗಿ ಹೋಗುತ್ತಾರೆ. ನಾಮದಿಂದ ಎಂದರೆ ಜ್ಞಾನದಿಂದ ಎಂದು ಅರ್ಥ. ಮೂರು ಆತ್ಮಗಳ ಜ್ಞಾನದಿಂದ ಪ್ರಜೆಗಳಿಗೆ ಉಪದೇಶಕೊಟ್ಟು ಶಿಷ್ಯರನ್ನಾಗಿ ಮಾಡಿರೆಂದು ಅಲ್ಲಿ ಹೇಳಲಾಗಿದೆ. ತಂದೆ ಎಂದರೆ ಆತ್ಮ ಎಂದೂ, ಕುಮಾರನು ಎಂದರೆ ಜೀವಾತ್ಮ ಎಂದೂ, ಪರಿಶುದ್ಧಾತ್ಮ ಎಂದರೆ ಪರಮಾತ್ಮಯೆಂದು ಅರ್ಥ. ಆಧ್ಯಾತ್ಮಿಕ ಎಂದರೆ ಆತ್ಮಗಳ ವಿಷಯವನ್ನು ತಿಳಿಯುವುದೇ ಆಧ್ಯಾತ್ಮಿಕ ಎನ್ನುತ್ತಾರೆ. ಆದರೆ ಬೈಬಲ್ ಗ್ರಂಥವನ್ನು ಓದಿದವರಿಗೆ ಮತ್ತಾಯ ಸುವಾರ್ತೆ 28ನೇ ಅಧ್ಯಾಯ 19ನೇ ವಾಕ್ಯ ಮೂರು ಆತ್ಮಗಳ ವಿಷಯವೆಂದು ತಿಳಿದಿಲ್ಲ. ಆ ವಾಕ್ಯವನ್ನು ಮತದಿಂದ ಮುಡಿಹಾಕಿರುವುದರಿಂದ ಕುಮಾರನು ಎಂದರೆ ಯೇಸುಯೆಂದು, ತಂದೆ ಎಂದರೆ ದೇವರೆಂದು ಲೆಕ್ಕಿಸಿಕೊಂಡು ದೇವರ ಕುಮಾರನು ಯೇಸುಯೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಪರಿಶುದ್ಧಾತ್ಮ ವಿಷಯಕ್ಕೆ ಬಂದರೆ ಯೇಸು ಹುಟ್ಟುವುದಕ್ಕಿಂತ ಮುಂಚೆ ದೇವರನ್ನು ಪರಿಶುದ್ಧಾತ್ಮ ಎನ್ನುತ್ತಿದ್ದರೆಂದು, ಯೇಸು ಹುಟ್ಟಿದ ನಂತರ ಪರಿಶುದ್ಧಾತ್ಮನನ್ನು ತಂದೆಯೆಂದು ಹೇಳುವುದು ನಡೆಯುತ್ತಿದೆಯೆಂದು ಲೆಕ್ಕ ಸರಿಮಾಡಿ ಹೇಳಿದ್ದಾರೆ. ಅವರ ಲೆಕ್ಕದಲ್ಲಿ ತಂದೆ ಎಂದರೂ, ಪರಿಶುದ್ಧಾತ್ಮ ಎಂದರೂ ಎರಡೂ ಒಂದೇಯೆಂದು ಅರ್ಥ. ಆ ವಿಧವಾಗಿ ಹೇಳುವುದರಿಂದ ದೇವರ ಕಾನೂನಿಗೆ ಪೂರ್ತಿ ವಿರುದ್ಧವಾಗಿ ಮಾತನಾಡಿದಂತಾಗುತ್ತಿದೆ. ಮೂರು ಆತ್ಮಗಳನ್ನು ದೇವರು ಹೇಳಿದರೆ ಮನುಷ್ಯ ಅವುಗಳನ್ನು ಎರಡು ಆತ್ಮಗಳಾಗಿ ಹೇಳಿಕೊಳ್ಳುವುದು ಅಜ್ಞಾನವಾಗುತ್ತದೆ.

ಈ ವಿಧವಾಗಿ ಕ್ರೈಸ್ತ ಮತದಲ್ಲಿ ಯೇಸುನನ್ನು ದೇವರ ಕುಮಾರನನ್ನಾಗಿ ಹೇಳಿಕೊಳ್ಳುತ್ತಾ, ತಂದೆಯೆಂದರೂ ಪರಿಶುದ್ಧಾತ್ಮಯೆಂದರೂ ಒಂದೇಯೆಂದು

ಹೇಳಿಕೊಳ್ಳುವುದು ದೊಡ್ಡ ಅಜ್ಞಾನವಾಗುವುದಲ್ಲದೆ ವಾಕ್ಯದಲ್ಲಿನ ಮೂರು ಆತ್ಮಗಳನ್ನು ಪೂರ್ತಿಯಾಗಿ ತಿಳಿಯದಹಾಗೆ ಹೋದಂತಾಗುತ್ತಿದೆ. ದೇವರು ತನ್ನ ಜ್ಞಾನವನ್ನು ಮೂರು ಆತ್ಮಗಳ ರೂಪದಲ್ಲಿ ತಿಳಿಸಿದರೂ, ಅದನ್ನು ಮನುಷ್ಯ ಸೂಕ್ಷ್ಮವಾಗಿ ತೆಗೆದುಕೊಳ್ಳದೆ ಸ್ಥೂಲವಾಗಿ ಅರ್ಥ ಮಾಡಿಕೊಳ್ಳುವುದರಿಂದ ಹೊರಗೆ ಕಾಣಿಸುವ ಯೇಸುನನ್ನು ಕುಮಾರನನ್ನಾಗಿ ಲೆಕ್ಕಿಸಿ ಜ್ಞಾನವನ್ನು ತಪ್ಪಾಗಿ ಅರ್ಥ ಮಾಡಿಕೊಳ್ಳುವುದು ನಡೆದಿದೆ. ಆದ್ದರಿಂದ ಬೈಬಲ್ ಗ್ರಂಥದಲ್ಲಿನ ತಂದೆ, ಕುಮಾರನು, ಪರಿಶುದ್ಧಾತ್ಮ ಎಂಬ ವಾಕ್ಯಕ್ಕೆ ಪೂರ್ತಿ ಭಾವವನ್ನು ಯಾರೂ ಗುರುತಿಸಲಾರದೆಹೋಗಿದ್ದಾರೆ. ತಂದೆ, ಕುಮಾರನ್ಯಾರೊ ಕ್ರೈಸ್ತರಿಗೆ ತಿಳಿಯದಂತಾಗಿದೆ. ಹಾಗೆಯೇ ನಡೆಸುವವನು, ನಡೆಸಲ್ಪಡುವವನು ಯಾರೋ ಮುಸ್ಲಿಮ್‌ರಿಗೆ ತಿಳಿಯದಂತಾಗಿದೆ. ನಾಶವಾಗುವವನು ಯಾರೋ, ನಾಶವಾಗದವನು ಯಾರೋ ಹಿಂದೂಗಳಿಗೆ ತಿಳಿಯದಂತಾಗಿದೆ. ಒಟ್ಟಾರೆ ಆತ್ಮಗಳ ವಿಷಯವೇ ಮೂರು ಮತದವರಿಗೆ ತಿಳಿಯದಹಾಗೆ ಹೋಗಿದೆ. ಆತ್ಮಗಳ ವಿವರ ತಿಳಿಯದೇ ಹೋಗಿರುವುದರಿಂದ ಎಲ್ಲರಿಗೂ ಆಧ್ಯಾತ್ಮಿಕವೇ ತಿಳಿಯದಹಾಗೆ ಹೋಗಿದೆ. ಆಧ್ಯಾತ್ಮಿಕ ಎಂಬುದು ಹೆಸರಿಗೆ ಮಾತ್ರವೇ ಇದೆ ಆದರೆ ಅವಗಾಹನೆಗೆ ಸ್ವಲ್ಪವೂ ಇಲ್ಲವೆಂದು ಹೇಳಬಹುದು.

ಪ್ರಪಂಚದಲ್ಲಿ ದೇವರ ಜ್ಞಾನ ತಿಳಿಯಬೇಕೆಂದರೆ ಎಲ್ಲವನ್ನು ಸ್ಥೂಲವಾಗಿ ಆಲೋಚಿಸಬಾರದು. ದೇವರ ವಿಷಯವೆಲ್ಲಾ ಸೂಕ್ಷ್ಮದ ಮೇಲೆ ಆಧಾರಪಟ್ಟಿರುತ್ತದೆ. ಆದ್ದರಿಂದ ಜ್ಞಾನವನ್ನೆಲ್ಲವನ್ನು ಸೂಕ್ಷ್ಮವಾಗಿಯೇ ಯೋಚಿಸಬೇಕಾಗಿರುತ್ತದೆ. ಪ್ರಪಂಚದಲ್ಲಿ ಹನ್ನೆರಡು ಮತಗಳಿದ್ದರೂ ಎಲ್ಲವುಗಳಿಗಿಂತ ಮುಖ್ಯವಾದವು ಮೂರು ಮತಗಳು ಮಾತ್ರವೇ. ಇಂದೂ, ಇಸ್ಲಾಮ್, ಕ್ರೈಸ್ತ ಎಂಬ ಮೂರು ಮತಗಳಲ್ಲಿ ದೇವರ ಜ್ಞಾನ ಸ್ವಲ್ಪವಾದರೂ ಇದೆ. ಆ ಲೆಕ್ಕಕ್ಕೆ ಹೋದರೆ ಉಳಿದ ಎಲ್ಲಾ ಮತಗಳಿಗಿಂತ ಈ ಮೂರು ಮತಗಳಲ್ಲಿ ಜ್ಞಾನ ಹೆಚ್ಚಾಗಿಯೇ ಇದೆಯೆಂದು ಹೇಳಬಹುದು. ಗ್ರಂಥಗಳಲ್ಲಿ ಹೇಳಿರುವುದೆಲ್ಲಾ ಜ್ಞಾನ ಅಲ್ಲದಿದ್ದರೂ ಕನಿಷ್ಟ ನೂರಕ್ಕೆ (100) ಇಪ್ಪತ್ತು (20) ರಷ್ಟು ಜ್ಞಾನವನ್ನು ಗ್ರಹಿಸಲ್ಪಟ್ಟರೆ ಮನುಷ್ಯ

ಜ್ಞಾನಿ ಆಗಬಲ್ಲನು. ಒಂದೊಂದು ಗ್ರಂಥದಲ್ಲಿ 20 ರಷ್ಟು ಜ್ಞಾನವಿದೆಯೆಂದುಕೊಳ್ಳಿ ಅದರಲ್ಲಿ ಅರ್ಧ ತಿಳಿದರೂ ಮನುಷ್ಯ ಕ್ರಮೇಣ ಸಂಪೂರ್ಣ ಜ್ಞಾನಿ ಆಗಬಲ್ಲನು. ಉದಾಹರಣೆಗೆ ಭಗವದ್ಗೀತೆಯಲ್ಲಿ ನೂರಕ್ಕೆ 75 ರಷ್ಟು ಜ್ಞಾನವಿದೆ. ಅದರಲ್ಲಿ ಶೇ.25 ರಷ್ಟು ಅರ್ಥವಾದರೂ ಕಾಲ ಕಳೆದಂತೆಲ್ಲಾ ಪೂರ್ತಿ 75 ರಷ್ಟು ಅರ್ಥವಾಗುವುದಕ್ಕೆ ಅವಕಾಶ ಇದೆ. ಆದರೆ ಮೊದಲೇ 25 ರಷ್ಟು ಅಜ್ಞಾನ ಭಾವದಿಂದ ಅರ್ಥಮಾಡಿಕೊಂಡರೆ ಉಳಿದ 50 ರಷ್ಟು ಕಾಲಕ್ರಮೇಣ ಅಜ್ಞಾನವಾಗಿಯೇ ಅರ್ಥವಾಗುತ್ತದೆ. ಮೊದಲು ಅಜ್ಞಾನ ದಾರಿಹಿಡಿದರೆ ಅದೇ ದಾರಿಯಲ್ಲಿ ಹೋಗುವುದು ನಡೆಯುತ್ತದೆ. ಆದ್ದರಿಂದ ಗ್ರಂಥದಲ್ಲಿನ ವಿಷಯವನ್ನು ಒಂದನ್ನು ಅರ್ಥಮಾಡಿಕೊಂಡರೂ ಅದನ್ನು ಜ್ಞಾನದಿಂದ ನೋಡಿಕೊಳ್ಳುವುದಾದರೆ ನಂತರ ತಿಳಿಯುವುದೆಲ್ಲವೂ ಜ್ಞಾನಮಾರ್ಗದಲ್ಲಿಯೇ ಅರ್ಥವಾಗುತ್ತದೆ. ಮೊದಲು ಒಂದು ವಿಷಯವನ್ನು ಅಜ್ಞಾನವಾಗಿ ಅರ್ಥಮಾಡಿಕೊಂಡರೆ ಅದೇ ದಾರಿಯಲ್ಲಿ ಉಳಿದ ವಿಷಯವೆಲ್ಲಾ ಅಜ್ಞಾನದಲ್ಲಿಯೇ ಅರ್ಥವಾಗುತ್ತದೆ. ಆದ್ದರಿಂದ ಗ್ರಂಥಗಳಿಂದ ನಾವು ಎಷ್ಟು ತಿಳಿದುಕೊಂಡಿದ್ದೇವೆಂಬುದು ಮುಖ್ಯವಲ್ಲ. ಗ್ರಂಥಗಳಿಂದ ಜ್ಞಾನ ತಿಳಿದಿದೆಯಾ ಇಲ್ಲವಾ ಎಂಬುದೇ ಮುಖ್ಯ. ಮೂರು ಆತ್ಮಗಳ ವಿಷಯ ಮೂರು ಗ್ರಂಥಗಳಲ್ಲಿ ಇರುವುದು ನಿಜವೇ ಆದರೂ, ಅದರಲ್ಲಿನ ಆತ್ಮಗಳ ಜ್ಞಾನ ಯಾವ ಬೋಧಕರಿಗಾದರೂ ಅರ್ಥವಾಗಿದೆಯಾ ಎಂದು ನೋಡಿದರೆ, ಅದರಲ್ಲಿ ಆತ್ಮಗಳಿರುವಂತಾಗಲಿ, ಆತ್ಮಗಳ ಜ್ಞಾನ ವಿದೆಯೆಂದಾಗಲಿ ಬೋಧಿಸುವ ಬೋಧಕರಿಗೇ ತಿಳಿಯದೆ ಹೋಗಿದೆ. ಬೋಧಕರಿಗೇ ತಿಳಿಯದೆ ಹೋದಾಗ, ಸಾಮಾನ್ಯ ಮಾನವರಿಗೆ ಅದರ ಬಗ್ಗೆ ತಿಳಿಯದೆಂದೇ ಹೇಳಬಹುದು. ಮೂರು ದೈವ ಗ್ರಂಥಗಳಲ್ಲಿ ಮನುಷ್ಯರು ದೈವಜ್ಞಾನವನ್ನು ನೋಡದೆ ಮತ ಜ್ಞಾನವನ್ನೇ ನೋಡುತ್ತಿದ್ದಾರೆ. ಗ್ರಂಥದಲ್ಲಿ ಹೇಳಿರುವುದನ್ನು ಜ್ಞಾನವಾಗಿ ಅರ್ಥಮಾಡಿಕೊಳ್ಳದೆ ಅಜ್ಞಾನವಾಗಿ ಅರ್ಥಮಾಡಿಕೊಳ್ಳುವುದರಿಂದ ನಂತರ ತಿಳಿಯಲ್ಪಡುವುದು ಜ್ಞಾನವಾಗಿ ಅರ್ಥವಾಗದೆಹೋಗಿ ಅಜ್ಞಾನವಾಗಿ ಅರ್ಥವಾಗಬಲ್ಲದು.

ಬೈಬಲ್ ಗ್ರಂಥದಲ್ಲಿನ ಒಂದು ವಾಕ್ಯವನ್ನು ಆಧಾರ ಮಾಡಿಕೊಂಡು ಬೈಬಲ್ ದೈವಗ್ರಂಥವೆಂದು ತಿಳಿದುಕೊಂಡಿದ್ದೇವೆ. ಅದರಿಂದ ಮಧ್ಯ ದೈವಗ್ರಂಥ ಯಾವುದಾಗಿರುವುದು ತಿಳಿದುಹೋಗಿದೆ. ಮಧ್ಯ ದೈವಗ್ರಂಥಕ್ಕೆ ಪ್ರವಕ್ತನಾಗಿ ಯೇಸುನನ್ನು ಹೇಳಿಕೊಳ್ಳಬಹುದು. ಆದರೆ ಯೇಸು ಕೇವಲ ಬೋಧಕನಾ? ಅಥವಾ ಗುರುವಾ? ಎಂದು ತಿಳಿದುಕೊಳ್ಳಬೇಕಾಗಿದೆ. ಇದಕ್ಕುಮುಂಚೆ ಎರಡು ದೈವಗ್ರಂಥಗಳು ತಿಳಿದರೂ ಅವುಗಳನ್ನು ಬೋಧಿಸಿದವರು ಒಬ್ಬರು ಗುರುವು (ಶ್ರೀಕೃಷ್ಣನು), ಒಬ್ಬನು ಬೋಧಕನು (ಜಿಬ್ರಯೇಲ್) ಎಂದು ತಿಳಿದುಹೋಗಿದೆ. ಈಗ ಉಳಿದ ಗ್ರಂಥ ಸಹ ತಿಳಿದುಹೋಗಿದೆ. ಆ ಗ್ರಂಥದಲ್ಲಿನ ಜ್ಞಾನವನ್ನು ಬೋಧಿಸಿದವನು ಗುರುವಾ? ಅಥವಾ ಬೋಧಕನಾ? ಎಂದು ನಿರ್ಧಾರಿಸಿಕೊಂಡರೆ ಈ ಗ್ರಂಥವೊಂದರ ಹೆಸರು ಪೂರ್ತಿಯಾಗುತ್ತದೆ. ಆದ್ದರಿಂದ ಮಧ್ಯ ದೈವಗ್ರಂಥ ಅಥವಾ ದ್ವಿತೀಯ ದೈವಗ್ರಂಥವಾದುದನ್ನು ಬೋಧಿಸಿದವನು ಯಾರು? ಎಂದು ತಪ್ಪದೆ ನೋಡಬೇಕಾಗಿ ಬಂದಿದೆ. ಬೈಬಲ್ ಗ್ರಂಥವನ್ನು ಹೇಳಿದವನು ಮನುಷ್ಯನೇ ಆಗಿರುವುದರಿಂದ ಗ್ರಹ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಖುರ್‌ಆನ್ ಗ್ರಂಥವನ್ನು ಹೇಳಿರುವುದು ಮನುಷ್ಯನಲ್ಲ. ಆದರೆ ಬೈಬಲ್‌ನನ್ನು ಹೇಳಿರುವುದು ಸಾಧಾರಣ ಮನುಷ್ಯನೇ. ಜ್ಞಾನವನ್ನು ಬೋಧರೂಪವಾಗಿ ಹೇಳಿದವನು ಬೋಧಕನೂ ಆಗಬಹುದು, ಪ್ರವಕ್ತನೂ ಆಗಬಹುದು, ಗುರುವೂ ಆಗಬಹುದು. ಬೈಬಲ್ ಗ್ರಂಥದಲ್ಲಿ ಬೋಧಕನಾಗಿ ಕಾಣಿಸುವವನನ್ನು ಅಂದರೆ ಯೇಸುನನ್ನು ಏನನ್ನಬೇಕು? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳಿಕೊಳ್ಳುವಮುಂಚೆ ಸ್ವಲ್ಪ ಬೈಬಲ್ ಗ್ರಂಥವನ್ನು ಕುರಿತು ತಿಳಿದುಕೊಳ್ಳೋಣ. ಬೈಬಲ್ ಗ್ರಂಥವೆಂದರೆ ಏನೋ ತಿಳಿದುಕೊಳ್ಳುವುದಾದರೆ ಯೇಸು ಎಂದರೆ ಯಾರೋ? ತಿಳಿಯುವುದಕ್ಕೆ ಅವಕಾಶವಿದೆ.

ಈ ದಿನ ನಾವು ನೋಡುತ್ತಿರುವ ಬೈಬಲ್ ಒಂದು ದೊಡ್ಡ ಗ್ರಂಥವಾಗಿ ಇದೆ. ಬೈಬಲ್ ಎರಡು ಭಾಗಗಳಾಗಿ ಇದೆ. ಅದರಲ್ಲಿ 'ಹಳೆಯ ಒಡಂಬಡಿಕೆ' ಎನ್ನುವ ಒಂದು ಭಾಗವಿರುವಾಗ, 'ಹೊಸ ಒಡಂಬಡಿಕೆ' ಎಂಬುವ ಎರಡನೆ

ಭಾಗವು ಇದೆ. ಹಳೆಯ ಒಡಂಬಡಿಕೆ ಎಂಬ ಮೊದಲನೆಯ ಭಾಗದಲ್ಲಿ 39 ಪುಸ್ತಕಗಳು ಇವೆ. ಹಾಗೆಯೇ ಹೊಸ ಒಡಂಬಡಿಕೆ ಎಂಬ ಭಾಗದಲ್ಲಿ 27 ಪುಸ್ತಕಗಳು ಇವೆ. ಇದರಪ್ರಕಾರ ಬೈಬಲ್‌ನಲ್ಲಿ ಒಟ್ಟು 66 ಪುಸ್ತಕಗಳು ಇವೆ. ಹೊಸ ಒಡಂಬಡಿಕೆ ಯೇಸು ಹುಟ್ಟಿದ ನಂತರ ಪ್ರಾರಂಭವಾಗಿದೆ. ಯೇಸು ಹುಟ್ಟುವುದಕ್ಕಿಂತ ಮೊದಲು ಇರುವ ಪುಸ್ತಕಗಳೆಲ್ಲ ಹಳೆಯ ಒಡಂಬಡಿಕೆಯೊಳಗಿನವೆ. ಹಳೆಯ ಒಡಂಬಡಿಕೆಯಲ್ಲಿ 39 ಪುಸ್ತಕಗಳು ಬರೆಲ್ಪಟ್ಟಿವೆ. ಯೇಸು ಹುಟ್ಟಿದ ನಂತರ ಹೊಸ ಒಡಂಬಡಿಕೆಯಲ್ಲಿ ಬರೆಯಲ್ಪಟ್ಟಿರುವವು 27 ಪುಸ್ತಕಗಳು. ಹೊಸ ಒಡಂಬಡಿಕೆಯಲ್ಲಿ ಮೊದಲ ನಾಲ್ಕು ಪುಸ್ತಕಗಳಲ್ಲಿ ಮಾತ್ರವೇ ಯೇಸು ಬೋಧನೆ ಕಾಣಿಸುತ್ತಿದೆ. ನಂತರ ಯೇಸು ಮರಣಿಸುವುದು, ನಂತರ ಕಾಣಿಸದಹಾಗೆ ಹೋಗುವುದು ನಡೆದಿದೆ. ಯೇಸು ಹೋದ ನಂತರ ಬರೆದ ಪುಸ್ತಕಗಳು 23 ಮಾತ್ರವೇ. ಹೊಸನಿಬಂಧನೆ ಎಂಬ ಬೈಬಲ್ ಎರಡನೆಯ ಭಾಗದಲ್ಲಿ **ಮೊದಲ ಪುಸ್ತಕ ಮತ್ತಾಯ, ಎರಡನೆಯದು ಮಾರ್ಕ, ಮೂರನೆಯದು ಲೂಕಾ, ನಾಲ್ಕನೆಯದು ಯೋಹಾನು ಎನ್ನುವವು. ಈ ನಾಲ್ಕು ಪುಸ್ತಕಗಳಲ್ಲಿ ಮಾತ್ರವೇ ಯೇಸು ಹೇಳಿದ ಬೋಧನೆ ಇದೆ.** ಉಳಿದವೆಲ್ಲವೂ ಯೇಸು ನಂತರ ಉಳಿದ ಮನುಷ್ಯರು ಹೇಳಿದ ಬೋಧನೆಗಳು ಇವೆ. ಹಾಗೆಯೇ ಹಳೆ ಒಡಂಬಡಿಕೆಯಲ್ಲಿನ 39 ಪುಸ್ತಕಗಳಲ್ಲಿ ಯೇಸುಗಿಂತ ಮುಂಚೆ ಹುಟ್ಟಿದವರು ಹೇಳಿದ ಸಮಾಚಾರ ಇದೆ.

ಹೊಸ ಒಡಂಬಡಿಕೆಯಲ್ಲಿ ಮೊದಲ ನಾಲ್ಕು ಪುಸ್ತಕಗಳಲ್ಲಿ ಯೇಸು ಬೋಧನೆ ಇದೆಯೆಂದು ಹೇಳಿಕೊಂಡಿದ್ದೇವೆ ಅಲ್ಲವೆ! ಆದ್ದರಿಂದ ಆ ನಾಲ್ಕು ಪುಸ್ತಕಗಳಿಗು ಹೆಸರುಗಳ ಜೊತೆ, ಪ್ರತ್ಯೇಕವಾದ ಬಿರುದುಗಳು ಇವೆ. ನಾಲಕ್ಕು ಪುಸ್ತಕಗಳಿಗೂ ಕೊನೆಯಲ್ಲಿ ಸುವಾರ್ತೆ ಎಂಬ ಬಿರುದು ಇದೆ. ಅದರಪ್ರಕಾರ ಒಂದನೆಯದು ಮತ್ತಾಯಿ ಸುವಾರ್ತೆ, ಎರಡನೆಯದು ಮಾರ್ಕ ಸುವಾರ್ತೆ, ಮೂರನೆಯದು ಲೂಕಾ ಸುವಾರ್ತೆ, ನಾಲ್ಕನೆಯದು ಯೋಹಾನ್ ಸುವಾರ್ತೆ ಎಂಬ ಹೆಸರುಗಳಿಂದ ಇವೆ. ಹೊಸ ಒಡಂಬಡಿಕೆಯಲ್ಲಿ ನಾಲ್ಕು ಸುವಾರ್ತೆಗಳು

ಪ್ರತ್ಯೇಕವಾಗಿವೆ. ನಾಲ್ಕು ಸುವಾರ್ತೆಗಳು ಮುಗಿದುಹೋದ ನಂತರ ಪ್ರಾರಂಭವಾದ ಮೊದಲ ಪುಸ್ತಕದ ಹೆಸರು ಅಪೋಸ್ತರರ ಕಾರ್ಯಗಳು, ಕೊನೆಯ ಪುಸ್ತಕದ ಹೆಸರು ಪ್ರಕಟಣೆಗಳ ಗ್ರಂಥ. ಹೊಸ ಒಡಂಬಡಿಕೆಯಲ್ಲಿನ 5ನೇ ಪುಸ್ತಕ ಅಪೋಸ್ತರರ ಕಾರ್ಯಗಳಾಗಿದ್ದು, 27ನೇ ಪುಸ್ತಕ ಪ್ರಕಟಣೆಗಳ ಗ್ರಂಥ. 5ನೇ ಪುಸ್ತಕದಿಂದ 27ನೇ ಪುಸ್ತಕದವರೆಗು ಮಧ್ಯದಲ್ಲಿರುವ 23 ಪುಸ್ತಕಗಳು ಪತ್ರಿಕೆ ಎಂಬ ಹೆಸರಿನಿಂದ ಇವೆ. ಇಲ್ಲಿ ನಾವು ಹೇಳುವುದೇನೆಂದರೆ! ಈದಿನ ಬೈಬಲ್ ಎಂದು ಹೇಳಲ್ಪಡುವುದು ಎಂದರೆ **62 ಪುಸ್ತಕಗಳಿಂದ ಕೂಡಿಕೊಂಡಿರುವುದು ಯೇಸುಗೆ ಸಂಬಂಧಿಸಿದ ಬೈಬಲ್ ಅಲ್ಲ. ಯೇಸು ಹೇಳಿದ ಬೈಬಲ್ ಕೇವಲ ನಾಲಕ್ಕು ಸುವಾರ್ತೆಗಳು ಮಾತ್ರವೆ.** ಆದ್ದರಿಂದ ಯೇಸು ಬೋಧನೆಯನ್ನು ಗುರುತಿಸುವುದಕ್ಕೆ ನಾಲ್ಕು ಪುಸ್ತಕಗಳೇ ಪ್ರತ್ಯೇಕವಾಗಿ ಇವೆಯೆಂದು ಗುರುತಿಸಿದಂತೆ ಅವುಗಳಿಗೆ ಸುವಾರ್ತೆಗಳು ಎಂದು ಹೆಸರಿಡುವುದು ನಡೆದಿದೆ. ಪ್ರಜೆಗಳು ಯೇಸುಗೆ ಸಂಬಂಧಿಸಿದ ನಾಲ್ಕು ಸುವಾರ್ತೆಗಳನ್ನೇ ನಿಜವಾದ ದೈವಗ್ರಂಥವಾಗಿ ಗ್ರಹಿಸುವುದಕ್ಕೆ ನಾವು **"ಸುವಾರ್ತೆ ಬೈಬಲ್"** ಎಂದು ಪ್ರತ್ಯೇಕವಾದ ಹೆಸರಿನಿಂದ ಕರೆಯುತ್ತಿದ್ದೇವೆ. ಮಧ್ಯ ಗ್ರಂಥ ಸುವಾರ್ತೆ ಬೈಬಲ್ ಮಾತ್ರವೇಯಾಗಲಿ ಬೈಬಲ್ ಎಲ್ಲವೂ ಅಲ್ಲವೆಂದು ಅರ್ಥ ಮಾಡಿಕೊಳ್ಳಬೇಕು.

ಇಲ್ಲಿಯವರೆಗೂ ಎಲ್ಲರೂ ಹೇಳುವ ಬೈಬಲನ್ನು ನಾವು ಹೇಳುತ್ತಿಲ್ಲ. ನಾವು ನಾಲ್ಕು ಸುವಾರ್ತೆಗಳಿರುವ ಬೈಬಲನ್ನು ಕುರಿತು ಮಾತ್ರವೇ ಹೇಳುತ್ತಿದ್ದೇವೆ. ನಾವು ಬೈಬಲ್‌ನಲ್ಲಿನ ಯಾವ ಜ್ಞಾನವನ್ನು ಮಾತನಾಡಿದರೂ ನಾಲ್ಕು ಸುವಾರ್ತೆಗಳಲ್ಲಿನ ವಿಷಯಗಳನ್ನೇ ತೆಗೆದುಕೊಂಡು ಮಾತನಾಡುವುದು ನಡೆಯುತ್ತಿದೆಯಾಗಲಿ, ಉಳಿದ 62 ಪುಸ್ತಕಗಳಲ್ಲಿನ ಯಾವೊಂದು ವಿಷಯವನ್ನು ತೆಗೆದುಕೊಂಡು ಹೇಳುತ್ತಿಲ್ಲ. ನಿಜವಾದ ಆಧ್ಯಾತ್ಮಿಕವೆಲ್ಲವೂ ಯೇಸು ಹೇಳಿದ ನಾಲ್ಕು ಸುವಾರ್ತೆಗಳಲ್ಲಿಯೇ ಇದೆ. ಆದಕಾರಣ ನಾಲ್ಕು ಪುಸ್ತಕಗಳನ್ನು ಪ್ರತ್ಯೇಕಿಸಿ **"ಸುವಾರ್ತೆ ಬೈಬಲ್"** ಎಂದು ಹೆಸರಿಟ್ಟುಕೊಂಡು ಅದರಲ್ಲಿನ ವಿಷಯಗಳನ್ನೇ ಹೇಳುತ್ತಿದ್ದೇವೆ. ಮೂರು ದೈವಗ್ರಂಥಗಳಲ್ಲಿ ಮಧ್ಯ ದೈವಗ್ರಂಥ ಇಲ್ಲವೆ ದ್ವಿತೀಯ

ದೈವಗ್ರಂಥ ನಾಲ್ಕು ಸುವಾರ್ತೆಗಳಿರುವ ಸುವಾರ್ತೆ ಬೈಬಲ್ ಎಂದು ಹೇಳಬಹುದು. ನಾವು ಕೆಲವು ವರ್ಷಗಳ ಮುಂಚೆಯಿಂದ ಈ ವಿಷಯವನ್ನು ಹೇಳುತ್ತಲೇ ಇದ್ದೇವೆ. ನಾವು ಬೈಬಲ್‌ನಲ್ಲಿನ ಜ್ಞಾನವನ್ನು ಹೇಳುವುದಾದರೇ ನಾಲಕ್ಕು ಸುವಾರ್ತೆಗಳಲ್ಲಿನ ಜ್ಞಾನ ಹೊರತು ಇತರ ಬೈಬಲ್‌ನಲ್ಲಿನ ವಿಷಯಗಳನ್ನು ಎಂದಿಗೂ ಹೇಳಲಿಲ್ಲ. ಇಲ್ಲಿಯವರೆಗೂ ಬೈಬಲ್ ಎಂದರೆ ಯಾವುದೆಂದು, ಬೈಬಲ್‌ನಲ್ಲಿನ ಸುವಾರ್ತೆ ಬೈಬಲ್ ಪ್ರತ್ಯೇಕತೆ ಹೊಂದಿರುವುದೆಂದು, ನಾಲ್ಕು ಸುವಾರ್ತೆಗಳನ್ನು ಮಾತ್ರವೇ ಯೇಸು ಹೇಳಿದ್ದಾನೆಂದು ಬೈಬಲನ್ನು ಕುರಿತು ಹೇಳಿಕೊಂಡಿದ್ದೇವೆ. ಈಗ ಸುವಾರ್ತೆ ಬೈಬಲನ್ನು ಹೇಳಿದ ಇಲ್ಲವೆ ಸುವಾರ್ತೆ ಬೈಬಲ್‌ಗೆ ಮಾತ್ರ ಬೋಧಕನಾದ ಯೇಸು ಗುರುವಾ! ಇಲ್ಲವೆ ಬೋಧಕನಾ! ಎಂದು ನೋಡುವುದಕ್ಕೆ ಪ್ರಯತ್ನಿಸೋಣ.

ಯೇಸು ಇಲ್ಲಿಗೆ ಎಂದರೆ 2014ನೇ ವರ್ಷಕ್ಕೆ ಹುಟ್ಟಿ 2047 ವರ್ಷಗಳಾಗಿದೆ. ಆತನು ಮರಣಿಸಿ 2014 ವರ್ಷಗಳು ಆಗಿದೆ. ಆತನ ಜೀವಿತ ಕಾಲ 33 ವರ್ಷಗಳು ಮಾತ್ರವೇ. ಆತನು ಬೋಧಿಸಿದ ಕಾಲ ಮೂರು ವರ್ಷಗಳು ಮಾತ್ರವೆ. ಆತನು ಮರಣಹೊಂದಿ ಸಮಾಧಿಯಲ್ಲಿದ್ದಿದ್ದು 33 ಗಂಟೆಗಳು ಮಾತ್ರವೇ. ಸಮಾಧಿಯಿಂದ ಹೊರಗೆ ಬಂದ ನಂತರ 33 ಬಾರಿ ಮಾತ್ರವೇ ಶಿಷ್ಯರಿಗೆ ಕಾಣಿಸಿದ್ದಾನೆ. ಈ ವಿಧವಾಗಿ ಆತನ ಜೀವನ ಹೆಚ್ಚಾಗಿ ಮೂರು ಸಂಖ್ಯೆಯಿಂದ ಮುಡಿಬಿದ್ದಿದೆ. ಯೇಸು ಜನ್ಮ ಪ್ರತ್ಯೇಕತೆಯನ್ನು ಸಂತರಿಸಿಕೊಂಡಿದೆ. ತಂದೆ ವೀರ್ಯಕಣದಿಂದ ಸಂಬಂಧವಿಲ್ಲದೆ ಹುಟ್ಟಿದವನು ಯೇಸು. ಯೇಸುನನ್ನು ಆತನ ಭಕ್ತರು ಯೇಸುಪ್ರಭು ಎನ್ನುತ್ತಿದ್ದರು. ಯೇಸು ಬಾಹ್ಯ ತಂದೆಯ ಸಂಬಂಧವಿಲ್ಲದೆ ತಾಯಿ ಮೇರಿಮಾತೆಗೆ ಜನ್ಮಿಸಿದ್ದಾನೆ. ಆತನು 30 ವರ್ಷಗಳು ಸಾಧಾರಣ ಜೀವನವನ್ನು ಕಳೆದನು. ತನ್ನ ಕುಟುಂಬದ ಜೊತೆ ಬೆರೆತು ಬಡಿಗಿ ಕೆಲಸವನ್ನು ವೃತ್ತಿಯಾಗಿ ಮಾಡಿಕೊಳ್ಳುತ್ತಾ 30 ವರ್ಷಗಳು ಕಳೆದ ನಂತರ ಮನೆ ಬಿಟ್ಟು ಹೊರಗೆ ಬಂದಿದ್ದಾನೆ. ಅಲ್ಲಿಯವರೆಗು ಯೇಸುಗೆ ಎಂತಹ ದೈವಜ್ಞಾನವೂ ತಿಳಿದಿಲ್ಲ. ಆತನು 30 ವರ್ಷಗಳ ಸಾಧಾರಣ ಜೀವನದಲ್ಲಿ

ಯಾವದಿನವೂ ಇತರ ಗುರುಗಳ ಹತ್ತಿರಕ್ಕೊ ಅಥವಾ ಬೋಧಕರ ಹತ್ತಿರಕ್ಕೊ ಹೋಗಿ ಜ್ಞಾನ ಕೇಳಲಿಲ್ಲ. ಆ ಕಾಲದಲ್ಲಿ ಒಂದು ಇಲ್ಲವೆ ಎರಡು ವರ್ಷಗಳು ಚಿಕ್ಕವಯಸ್ಸಿನಲ್ಲಿ ಅಕ್ಷರಾಭ್ಯಾಸ ಮಾಡಿ ಅಕ್ಷರಗಳನ್ನು ಕಲಿತಿದ್ದಾನೆ ಹೊರತು ಗ್ರಂಥಗಳು ಯಾವುದೂ ಓದಲಿಲ್ಲ. ಆತನು ಮನೆಹತ್ತಿರ ಕಳೆದ 30 ವರ್ಷಗಳ ಕಾಲ ಎಲ್ಲಿಗೂ ಮನೆಬಿಟ್ಟು ಹೋಗಿರುವುದು ಸಹ ಇಲ್ಲ. ಎಷ್ಟೋ ಕ್ರಮಶಿಕ್ಷಣದಿಂದ ತನ್ನ ಕೆಲಸವನ್ನು ತಾನು ಮಾಡಿಕೊಳ್ಳುತ್ತಿದ್ದನು. 30 ವರ್ಷಗಳ ವಯಸ್ಸು ಬಂದ ನಂತರ ಹೊರಗಿನ ಸಮಾಜದೊಳಗೆ ಬಂದು ದೈವಜ್ಞಾನವನ್ನು ಪ್ರಜೆಗಳಿಗೆ ತಿಳಿಸಬೇಕೆಂದುಕೊಂಡಿದ್ದಾನೆ.

ಮೂರು (3) ಹತ್ತುಗಳು ವಯಸ್ಸು ಕಳೆದ ನಂತರ ಮೂರು (3) ವರ್ಷ ಗಳು ಪ್ರಜೆಗಳಲ್ಲಿ ಜ್ಞಾನ ಹೇಳುವುದು ನಡೆದಿದೆ. ಸ್ವಲ್ಪವೂ ಜ್ಞಾನ ತಿಳಿಯದ ಮನುಷ್ಯ ಒಂದುಬಾರಿ ಪ್ರಜೆಗಳಿಗೆ ಜ್ಞಾನ ಹೇಳುವುದಕ್ಕೆ ಸಜ್ಜಾಗುವುದು ಸಾಮಾನ್ಯರಿಂದ ಆಗುವ ಕೆಲಸವಲ್ಲ. ಆ ಒಂದು ವಿಷಯದಲ್ಲಿಯೇ ಯೇಸು ಯಾರೆಂದು ಪ್ರಶ್ನೆ ಬಾರದೆ ಇರುವುದಿಲ್ಲ. ಎಲ್ಲಿಯೂ ಜ್ಞಾನವನ್ನು ಕೇಳದೆ, ಸ್ವತಃವಾಗಿ ಜ್ಞಾನವನ್ನು ಹೇಳುವವನು, ಯಾರ ಬೋಧನೆಗಳನ್ನು ಆಧಾರ ಮಾಡಿಕೊಳ್ಳದೆ ಜ್ಞಾನವನ್ನು ತಿಳಿಸುವವನು ವಾಸ್ತವಕ್ಕೆ ಗುರುವೇ ಆಗುತ್ತಾನೆ. ಒಬ್ಬ ಗುರುವು ಹೊರತು ಉಳಿದವರು ಯಾರಾಗಲಿ ಸ್ವತಃವಾಗಿ ಜ್ಞಾನವನ್ನು ಹೇಳಲಾರರು. ಅದರಿಂದ ಯೇಸು ಸಾಮಾನ್ಯ ಮಾನವನು ಅಲ್ಲವೆಂದು ತಿಳಿದುಹೋಗುತ್ತದೆ. ಯೇಸು ಸಾಧಾರಣ ಮನುಷ್ಯನಾಗಿ ಕಾಣಿಸಿದರೂ ಆತನೊಳಗಿನಿಂದ ಬಂದಿರುವ ಬೋಧನೆಯನ್ನು ಗುರು ಹೊರತು ಯಾರೂ ಹೇಳಲಾರರೆಂದು, ಈತನು ಗುರುವಾಗಿ ಇರುತ್ತಾನೇನೊ ಎಂಬ ಅನುಮಾನ ಪ್ರಜೆಗಳಿಗೂ ಸಹ ಬಂದಿರಬಹುದು. ಯೇಸುವಿನ ಬಗ್ಗೆ ಎಲ್ಲರ ಅನುಮಾನಗಳು ತೀರುವುದಕ್ಕೆ ಗತದಲ್ಲಿ ನಾವು ಬರೆದ **"ಕೃಷ್ಣನ ಮರಣ ಲೋಕವನ್ನು ಕಣ್ತೆರೆಸಿದಂತೆ"** ಎಂಬ ಪಾಠವನ್ನು ಇಲ್ಲಿ ಹೊಂದಿಸುತ್ತಿದ್ದೇವೆ.



## 82 ಕೃಷ್ಣನ ಮರಣ ಲೋಕವನ್ನು ಕಣ್ತೆರೆಸುತ್ತದೆ

ಕ್ರಿಸ್ತಪೂರ್ವ 02–02–3102ನೆ ವರ್ಷ ಕೃಷ್ಣನು ಮರಣಿಸಿದ್ದಾನೆ. ಜನವರಿ 14ನೆ ತಾರೀಖು ನಂತರ ಉತ್ತರಾಯಣ ಕಾಲ ಬರುತ್ತದೆ. ಆದ್ದರಿಂದ ಕೃಷ್ಣನು ಮರಣಿಸಿರುವುದು ಉತ್ತರಾಯಣದಲ್ಲಿ ಎಂದು ತಿಳಿಯುತ್ತಿದೆ. ಒಂದುದಿನ ಕೃಷ್ಣನು ಒಂದು ಮರದಪೊದೆ ಹತ್ತಿರ ಕಾಲುಮೇಲೆ ಕಾಲು ಇಟ್ಟುಕೊಂಡು ಮಲಗಿಕೊಂಡು ಕಾಲನ್ನು ಕದಲಿಸುತ್ತಿರುವಾಗ, ಆ ಪ್ರಾಂತಕ್ಕೆ ಬೇಟೆಗೆ ಬಂದ ಬೇಟೆಗಾರ ಪೊದೆಮರೆಯಲ್ಲಿ ಕಾಲು ಕದಲುವುದನ್ನು ನೋಡಿ, ಅಲ್ಲಿ ಜಿಂಕೆ ಕದಲುತ್ತಿದೆಯೆಂದು ತಿಳಿದು ಬಾಣವನ್ನು ಹೊಡೆದಾಗ, ಅದು ಕೃಷ್ಣನ ಬಲಗಾಲಿನ ಹೆಬ್ಬೆರಳಿಗೆ ತಾಕಿತು. ಹೆಬ್ಬೆರಳಿಗೆ ಸಿಕ್ಕಿಕೊಂಡ ಬಾಣದಿಂದ ಕೃಷ್ಣನ ಶರೀರದಿಂದ ರಕ್ತ ಸೋರಿ ಆತನು ಮರಣಿಸುವುದು ನಡೆದಿದೆ. ವಿಶ್ವವ್ಯಾಪ್ತವಾಗಿ ಅಣುಅಣುವಿನಲ್ಲಿರುವ ಶಕ್ತಿ ಯಾವುದೊ, ಆ ಶಕ್ತಿಯಲ್ಲಿನ ಭಾಗ ಒಂದು ಶರೀರವನ್ನು ಏರ್ಪಡಿಸಿಕೊಂಡು ಬಂದು, 126 ವರ್ಷಗಳು ಮಾನವರೊಂದಿಗೆ ಸಹಜೀವನ ಮಾಡಿ ತನ್ನ ಧರ್ಮಗಳನ್ನು ತಿಳಿಸಿ, ಶರೀರದಲ್ಲಿ ಇಲ್ಲದಂತೆ ಎಲ್ಲಾಕಡೆ ಇರುವ ತನ್ನ ಶಕ್ತಿಯಲ್ಲಿ ಬೆರೆತುಹೋಗಿದೆ. ಹಾಗೆ ಬಂದುಹೋಗಿರುವುದು ಸಾಧಾರಣ ಜೀವಾತ್ಮವಲ್ಲ, ಪರಮಾತ್ಮ ಶಕ್ತಿ ಎಂದು ಒಬ್ಬ ಭೀಷ್ಮನಿಗೆ ಹೊರತು ಯಾರಿಗೂ ತಿಳಿದಿಲ್ಲ. ಭೀಷ್ಮನು ಕೃಷ್ಣನಿಗಿಂತ ಮೊದಲೇ ಮರಣಿಸಿದ್ದಾನೆ. ಆದ್ದರಿಂದ ಕೃಷ್ಣನು ಮರಣಿಸಿದಾಗ ಆ ಶರೀರದಲ್ಲಿನ ಜೀವಾತ್ಮವಾಗಿ ಇಷ್ಟುಕಾಲ ಇರುವುದು ದೈವಶಕ್ತಿ ಎಂದು ಯಾರಿಗೂ ತಿಳಿದಿಲ್ಲ. 126 ವರ್ಷಗಳು ಶರೀರದಿಂದ ಬದುಕಿದ ಆ ಶಕ್ತಿಹೆಸರು **"ಕೃಷ್ಣ"** ಎಂಬ ಎರಡು ಅಕ್ಷರಗಳು ಮಾತ್ರವೇ. ಕೃಷ್ಣ ಎಂಬ ಶಬ್ಧವೊಂದರ ಅರ್ಥ ಕಪ್ಪು ಬಣ್ಣ ಎಂದು ತಿಳಿಯುತ್ತಿದೆ. ಕೃಷ್ಣ ಪದವು ಕಪ್ಪನೆ ಬಣ್ಣವನ್ನು ತಿಳಿಸುತ್ತಿದೆ. ಕತ್ತಲು ಕಪ್ಪಗಿರುತ್ತದೆ. ಪೂರ್ತಿ ಕತ್ತಲಲ್ಲಿ ಏನು ಕಾಣಿಸದೆ ಕಪ್ಪನೆ ಬಣ್ಣ ಮಾತ್ರ ಕಾಣಿಸುತ್ತದೆ. ಮನುಷ್ಯ ಯಾವಾಗಲೂ ಯಾವುದೋ ಒಂದು ಕಾಣಿಸುವ ಬೆಳಕನ್ನೇ ಕೋರಿಕೊಳ್ಳುತ್ತಾನೆ. ಆದರೆ ಏನು ಕಾಣಿಸದ ಕತ್ತಲನ್ನು ಕೋರಿಕೊಳ್ಳುವುದಿಲ್ಲ. ಅದೇ ವಿಧವಾಗಿ ಭೂಮಿಮೇಲೆ ಪ್ರತಿ ಮನುಷ್ಯ ಯಾವುದೊ ಒಂದು ವಿಷಯವನ್ನು ತಿಳಿಸುವ ಮಾಯೆಯನ್ನೇ ಕೋರಿಕೊಳ್ಳುತ್ತಾನೆ. ಆದರೆ ಯಾವ ವಿಷಯವಿಲ್ಲದ, ಯಾವ ಗುಣವಿಲ್ಲದ

ದೈವವನ್ನು ಕೋರಿಕೊಳ್ಳುವುದಿಲ್ಲ. ದೇವರು ಯಾರಿಗೂ ಕಾಣಿಸುವವನಲ್ಲ. **ದೇವರನ್ನು ಯಾರೂ ಕೋರಿಕೊಳ್ಳುತ್ತಿಲ್ಲ ಎಂದು ತಿಳಿಯುವುದಕ್ಕೆ ಗುರುತಾಗಿ ಭಗವಂತನು ತನ್ನ ಹೆಸರಾಗಿ ಕಪ್ಪನೆ ಬಣ್ಣಕ್ಕೆ ಗುರುತಾದ ಕಪ್ಪು (ಕೃಷ್ಣ) ಎಂಬ ಹೆಸರನ್ನು ಇಟ್ಟುಕೊಂಡಿದ್ದಾನೆ.**

ವಿಶ್ವವೆಲ್ಲಾ ವ್ಯಾಪಿಸಿ ಯಾರಿಗೂ ತಿಳಿಯದ ಶಕ್ತಿಯೇ ಕೃಷ್ಣ ಶರೀರದಲ್ಲಿದ್ದು ಕೊನೆಗೆ ಮರಣಿಸಿದೆ. ಕೃಷ್ಣ ಶರೀರದಲ್ಲಿನ ಶಕ್ತಿಯೂ ಹೊರಗೆ ವಿಶ್ವವೆಲ್ಲಾ ಅಣುಅಣುವಿನಲ್ಲಿ ವ್ಯಾಪಿಸಿರುವ ಶಕ್ತಿಯೂ ಎರಡೂ ಒಂದೇ. ಆದ್ದರಿಂದ ನೀರು ನೀರಿನಲ್ಲಿ ಬೆರೆತು ಹೋದಂತೆ, ಹೊರಗಿನ ಶಕ್ತಿ, ಕೃಷ್ಣ ಶರೀರದಲ್ಲಿನ ಶಕ್ತಿ ಎರಡೂ ಒಂದಾಗಿ ಬೆರೆತುಹೋಗಿವೆ. ಹುಟ್ಟಿದ ಮನುಷ್ಯ ಯಾರಾದರೂ ಮರಣಿಸಿದ ನಂತರ ಜನ್ಮಿಸದಂತೆ ಮೋಕ್ಷವನ್ನು ಹೊಂದಬೇಕೆಂದರೆ ಅಂದರೆ ದೇವರಲ್ಲಿ ಸೇರಬೇಕೆಂದರೆ ಭಗವದ್ಗೀತೆಯಲ್ಲಿ ಹೇಳಿದ ಸೂತ್ರದ ಪ್ರಕಾರ ಮರಣಿಸಿದ ವ್ಯಕ್ತಿ ಯೋಗಿಯಾಗಿರಬೇಕು. ಮರಣಿಸಿದ ಯೋಗಿ ಉತ್ತರಾಯಣ, ಶುಕ್ಲಪಕ್ಷ, ಹಗಲು, ಸೂರ್ಯರಶ್ಮಿ ಹೊಂದಿದ ಸಮಯದಲ್ಲಿ ಮರಣಿಸಿರಬೇಕು. ಅಂತಹವನು ಮಾತ್ರವೆ ಮೋಕ್ಷವನ್ನು ಹೊಂದುತ್ತಾನೆ. ಈ ಸೂತ್ರವನ್ನು ಹೇಳಿದ ಕೃಷ್ಣನು ಈ ಸೂತ್ರದ ಪ್ರಕಾರ ಮರಣಿಸಿದ್ದಾನಾ? ಎಂದು ಕೇಳಬಹುದು. ಅದಕ್ಕೆ ಸಮಾಧಾನ ಏನೆಂದರೆ! ಗೀತೆಯಲ್ಲಿ ಹೇಳಿದ ಸೂತ್ರದ ಪ್ರಕಾರ ಕೃಷ್ಣನು ಕರ್ಮಯೋಗಿಯಾಗಿ ಇದ್ದಾನೆ. ಉತ್ತರಾಯಣದಲ್ಲಿಯೇ ಹಗಲುಹೊತ್ತು, ಸೂರ್ಯರಶ್ಮಿ ಹೊಂದಿದ ಸಮಯದಲ್ಲಿಯೇ ಮರಣಿಸಿದ್ದಾನೆ. ಆದರೆ ಆತನು ಮರಣಿಸಿರುವುದು ಶುಕ್ಲಪಕ್ಷದಲ್ಲಿ ಅಲ್ಲ. ಕೃಷ್ಣಪಕ್ಷದಲ್ಲಿ ಮರಣಿಸಿದ್ದಾನೆ. ಮೋಕ್ಷ ಹೊಂದಬೇಕಾದ ಯೋಗಿ ಶುಕ್ಲಪಕ್ಷದಲ್ಲಿ ಮರಣಿಸಬೇಕಾಗಿದೆ. ಆದರೆ ಕೃಷ್ಣನು ಕೃಷ್ಣಪಕ್ಷದಲ್ಲಿ ಮರಣಿಸಿರುವುದರಿಂದ, ಭಗವದ್ಗೀತೆಯಲ್ಲಿ ಭಗವಂತನಾದ ಕೃಷ್ಣನು ಹೇಳಿದ ಸೂತ್ರದ ಪ್ರಕಾರ ಕೃಷ್ಣನೇ ಮೋಕ್ಷಕ್ಕೆ ಹೋಗಲಿಲ್ಲವೆಂದು, ಪುನಃ ಜನ್ಮಕ್ಕೆ ಹೋಗಿದ್ದಾನೆಂದು ಹೇಳಬಹುದು. ಆದರೆ ಕೃಷ್ಣನು ದೇವರೊಳಗೇ ಹೋಗಿದ್ದಾನೆ, ಆದರೆ ಜನ್ಮಕ್ಕೆ ಹೋಗಲಿಲ್ಲ. ಇಲ್ಲಿ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿದ ಸೂತ್ರ ಕೃಷ್ಣನಿಗೆ ಅನ್ವಯಿಸುವುದಿಲ್ಲವಾ! ಎಂದು ಕೆಲವರು ಕೇಳಬಹುದು.

ಅದಕ್ಕೆ ನಮ್ಮ ಉತ್ತರ ಏನೆಂದರೆ! ನೀರು ನೀರಿನಲ್ಲಿ ಬೆರೆಯುವುದಕ್ಕೆ ಯಾವ ಅಡಚಣೆಯೂ ಇಲ್ಲ. ಆದರೆ ಮಂಜು ಗಡ್ಡೆಗಳು ನೀರಿನಲ್ಲಿ ಬೆರೆಯಬೇಕೆಂದರೆ ಅವು ನೀರಾಗಿ ಬದಲಾಗುವುದಕ್ಕೆ ಸ್ವಲ್ಪ ಉಷ್ಣೋಗ್ರತೆ ಅಗತ್ಯ. ಕೃಷ್ಣನು ಹೇಳಿರುವುದು ಮಂಜುಗಡ್ಡೆಗಳು ನೀರಾಗಿ ಬದಲಾಗುವುದಕ್ಕೆ ಉಷ್ಣೋಗ್ರತೆ ಅಗತ್ಯವಾದಂತೆ ಮನುಷ್ಯರು ದೇವರಾಗಿ ಬದಲಾಗುವುದಕ್ಕೆ ಇಂತಹ ಸಮಯದಲ್ಲಿಯೇ ಮರಣ ಹೊಂದಬೇಕೆಂದು ಹೇಳಿದ್ದಾನೆ. ಕೃಷ್ಣನು ನೀರಿನಂತಹವನು ಆದ್ದರಿಂದ ಮರಣಕಾಲ ನಿಯಮ ಆತನಿಗೆ ಇಲ್ಲ. ಆದರೆ ಮನುಷ್ಯರು ಮಂಜುಗಡ್ಡೆ ಯಂತಹವರು ಅವರಿಗೆ ಉಷ್ಣ ಎಂಬ ಜ್ಞಾನ ಅಗತ್ಯವಿದೆ. ಆದ್ದರಿಂದ ಅವರಿಗೆ ಮರಣಕಾಲನಿಯಮವು ಇದೆ. **"ಜಗವನ್ನೇ ಅರಿತ ಬ್ರಾಹ್ಮಣನಿಗೆ ಜನಿವಾರ ಏಕೆ"** ಎನ್ನುವಹಾಗೆ ಕಾಲವೇ ತಾನಾದವನಿಗೆ ಮರಣಕಾಲ ನಿಯಮ ಅನ್ವಯಿಸುವುದಿಲ್ಲ. ಕರ್ಮವೆಂಬ ಚಳಿಗೆ ಗಡ್ಡೆಕಟ್ಟಿದ ಮನುಷ್ಯರಿಗೆ ಶಾಖ ಎಂಬ ಜ್ಞಾನದ ಅವಶ್ಯಕತೆ ಇದೆ. ಆದ್ದರಿಂದ ಸಾಧಾರಣ ಮನುಷ್ಯರಿಗೆ ಮಾತ್ರವೇ ಮರಣಕಾಲ ನಿಯಮ ಅನ್ವಯಿಸುತ್ತದೆಂದು ತಿಳಿಯಬೇಕು. ಮರಣಕಾಲ ತನಗೆ ಅನ್ವಯಿಸುವುದಿಲ್ಲವೆಂದು ತಿಳಿಸುವುದಕ್ಕೋಸ್ಕರವೆ ಆತನು ಕೃಷ್ಣಪಕ್ಷದಲ್ಲಿಯೇ ಮರಣಿಸಿದ್ದಾನೆ.

ಪೊದೆಮರೆಯಲ್ಲಿ ತಣ್ಣನೆಯ ನೆರಳಲ್ಲಿ ಮಲಗಿರುವ ಕೃಷ್ಣನನ್ನು ಬೇಟೆಗಾರನು ಬೇಟೆಗಾಗಿ ಅಲ್ಲಿಗೆ ಬಂದು, ಕದಲುತ್ತಿರುವ ಕಾಲನ್ನು ಜಿಂಕೆ ಎಂದುಕೊಂಡು ಬಾಣ ಹೊಡೆದಾಗ, ಅದು ಕೃಷ್ಣನ ಬಲಗಾಲಿನ ಹೆಬ್ಬೆರಳನ್ನು ತಾಕಿ ರಕ್ತ ಸೋರುತ್ತಿರುವ ಸಮಯದಲ್ಲಿ, ಆ ಬೇಟೆಗಾರನು ಬಂದು ನೋಡಿ ನಾನು ಎಂತಹ ಕೆಲಸಮಾಡಿದ್ದೇನೆಂದು ರೋದಿಸುತ್ತಿರುವಾಗ, ಕೃಷ್ಣನು ಹೀಗೆ **"ನೀನು ದುಃಖಪಡಬೇಕಾದುದು ಏನೂ ಇಲ್ಲ. ನಿರ್ಣಯದ ಪ್ರಕಾರವೆ ಎಲ್ಲಾ ನಡೆಯುತ್ತಿವೆ. ನನ್ನ ಹುಟ್ಟು, ಸಾವು ಎರಡೂ ನಡೆಯುವುದಕ್ಕೆ ಒಂದು ಕಾರಣವಿದೆ. ನಾನು ಅಶುಭ್ರವಾದ ಸ್ಥಳದಲ್ಲಿ ಸೆರೆಮನೆಯಲ್ಲಿ ತಾಯಿಪಕ್ಕ ತಂದೆ ಹೊರತು ಯಾರೂ ಇಲ್ಲದೆ ಹುಟ್ಟಬೇಕೆಂಬ ನಿರ್ಣಯವಿದೆ. ಆ ನಿರ್ಣಯದ ಪ್ರಕಾರವೇ**

**ದೀನಸ್ಥಿತಿಯಲ್ಲಿ ಹುಟ್ಟಿದ್ದೇನೆ. ಹಾಗೆಯೇ ಮರಣ ಸಹ ಒಬ್ಬನೇ ಇರುವ ಸಮಯದಲ್ಲಿ, ಇತರರ ಆಯುಧದಿಂದ ಗಾಯವಾದವನಾಗಿ ರಕ್ತಸೋರಿ ಮರಣಿಸಬೇಕೆಂದು ನಿರ್ಣಯ ಇದೆ. ಅದರ ಪ್ರಕಾರವೇ ಈಗ ಒಂಟಿಯಾಗಿರುವ ನನ್ನನ್ನು ನಿನ್ನ ಬಾಣ ಗಾಯಪಡಿಸಿದೆ. ಹುಟ್ಟು, ಸಾವು ಎರಡೂ ಹೀಗೆ ನಡೆಯಬೇಕೆಂದು ಇದೆ. ಆದ್ದರಿಂದ ನೀನು ದುಃಖಪಡಬೇಡ"** ಎಂದಿದ್ದಾನೆ. ಆ ಮಾತುಗಳು ಕೇಳಿದ ಬೇಟೆಗಾರ "ನೀವು ಎಷ್ಟೋ ಸಂಪದ, ಬಲ ಎರಡೂ ಇರುವವರು. ನೀವು ಏನು ಇಲ್ಲದವರ ಹಾಗೆ ದೀನಸ್ಥಿತಿಯಲ್ಲಿ ಹುಟ್ಟುವುದು, ಹಾಗೆಯೇ ಒಂಟಿಯಾಗಿ ಗಾಯವಾಗಿ ಪಕ್ಕದಲ್ಲಿ ಯಾರೂ ಇಲ್ಲದಹಾಗೆ ಮರಣಿಸುವುದು ನೀವು ನಿರ್ಣಯವೆಂದರೂ ನನಗೆ ಹೇಳಲಾರದಷ್ಟು ದುಃಖ ಉಂಟಾಗುತ್ತಿದೆ" ಎಂದಿದ್ದಾನೆ. ಹಾಗೆ ದುಃಖದಿಂದ ಮಾತನಾಡಿದ ಬೇಟೆಗಾರನನ್ನು ಸಮಾಧಾನಪಡಿಸುತ್ತ ಕೃಷ್ಣನು "ದೀನಸ್ಥಿತಿಯಲ್ಲಿ ಹುಟ್ಟಿದ ನನ್ನ ಜನನ, ಗಾಯಪಟ್ಟು ಒಂಟಿಯಾಗಿ ಮರಣಿಸುವ ನನ್ನ ಮರಣ ಮುಂಬರುವ ಪೀಳಿಗೆಗೆ ಅವಶ್ಯವಿದೆ. ಈಗಿನಿಂದ ಕಲಿಯುಗ ಪ್ರಾರಂಭವಾಗುತ್ತದೆ. ಕಲಿಯುಗದಲ್ಲಿ ಇಲ್ಲಿಯವರೆಗು ಇಲ್ಲದ ಅಜ್ಞಾನ ಪ್ರಾರಂಭವಾಗುತ್ತದೆ. ಇಲ್ಲಿಯವರೆಗು ಇಲ್ಲದ ಮತಗಳು ಕಲಿಯುಗದಲ್ಲಿ ಹುಟ್ಟಿಬರುತ್ತವೆ. ಸೃಷ್ಠಿ ಆದಿಯಿಂದ ಪ್ರಪಂಚ ವ್ಯಾಪ್ತವಾಗಿರುವ ಇಂದೂ ಧರ್ಮಗಳು ಕ್ಷೀಣಿಸಿ, ಸ್ವಲ್ಪ ಮಾತ್ರ ಇಂದೂದೇಶ ದಲ್ಲಿಯೇ ಉಳಿದು ಅದೂ ಬಲಹೀನವಾಗಿ ಇರುತ್ತವೆ. ಇಂದೂಗಳು ತಮ್ಮ ಧರ್ಮಗಳನ್ನು ತಾವೇ ತಿಳಿಯದೆ, ತಮ್ಮನ್ನು ತಾವು ಹಿಂದೂಗಳಾಗಿ ಹೇಳಿ ಕೊಳ್ಳುತ್ತಾರೆ. ಇಂದೂಪಥವನ್ನು (ಜ್ಞಾನಮಾರ್ಗವನ್ನು) ಹಿಂದೂಮತವಾಗಿ ಪ್ರಕಟಿಸಿಕೊಳ್ಳುತ್ತಾರೆ. "ಪಥ" ಎಂಬ ಶಬ್ಧ ಕೊನೆಗೆ 'ಮತ' ಎಂಬ ಪದವಾಗಿ ಬದಲಾವಣೆಹೊಂದುತ್ತದೆ. **ಪಥ ಎಂದರೆ ಮಾರ್ಗ, ಮತ ಎಂದರೆ ಇಷ್ಟ** ಇದು ನನ್ನ ಮಾರ್ಗ ಎಂಬ ಅರ್ಥವನ್ನು ಬಿಟ್ಟು, ಇದು ನನ್ನ ಇಷ್ಟ ಎಂಬ ಮಾತನ್ನು ಹೇಳುತ್ತಾರೆ.

ಆದಿಯಿಂದ ಇಂದೂಧರ್ಮಗಳು ವಿಶ್ವವ್ಯಾಪ್ತವಾಗಿ ಇವೆ. ಕಲಿಯುಗದಲ್ಲಿ ಮತಗಳು ತಯಾರಾಗಿ ಇಂದೂ ಪಥವೊಂದರ ಸ್ಥಾನವನ್ನು ಕ್ರೈಸ್ತ ಮತ

ಆಕ್ರಮಿಸಿಕೊಳ್ಳುತ್ತದೆ. ಹಿಂದೂಗಳೆಲ್ಲರೂ ಒಬ್ಬೊಬ್ಬರಾಗಿ ಆ ಮತದಲ್ಲಿ ಸೇರಿಹೋಗುತ್ತಾ ಹಿಂದೂಮತ ಕ್ಷೀಣಿಸಿಹೋಗುತ್ತದೆ. ಅಂತಹ ಸಂದರ್ಭದಲ್ಲಿ ಹಿಂದೂಮತವನ್ನು ಕಾಪಾಡಿಕೊಳ್ಳುವುದಕ್ಕೆ ಕೆಲವು ಸಂಘಗಳು ಏರ್ಪಡುತ್ತವೆ. ಅಂತಹ ಹಿಂದೂಸಂಘಗಳಿಗು, ತಮ್ಮ ಮತಕ್ಕು ಸಂಬಂಧಿಸಿದ ಧರ್ಮಗಳು ತಿಳಿಯದಿರುವುದರಿಂದ, ಅವರಿಂದ ಹಿಂದೂ ಮತಕ್ಕೆ ನಷ್ಟ ಏರ್ಪಡುತ್ತದೆ. ಜ್ಞಾನವಿಲ್ಲದ ಹಿಂದೂ ಸಂಘಗಳ ಕೆಲಸಗಳನ್ನು ನೋಡಿ ಹಿಂದೂಗಳೇ ಅಸಹ್ಯಿಸಿಕೊಳ್ಳುತ್ತಾರೆ. ಹಿಂದೂ ದೇಶದಲ್ಲಿ ಸಹ ಕ್ರೈಸ್ತ ಮತ ವೇಗವಾಗಿ ವ್ಯಾಪಿಸಿ ಹೋಗುತ್ತದೆ. ಹಾಗೆ ಬೆಳೆದುಹೋಗುತ್ತಿರುವ ಮತವನ್ನು ನೋಡಿ ಆ ಮತದ ಪ್ರವಕ್ತಗೆ ಪೂರ್ತಿ ವಿರೋಧಿಗಳಾಗಿ ಹಿಂದೂಗಳು ತಯಾರಾಗುತ್ತಾರೆ. ತಮ್ಮ ಮತವನ್ನು ಹಿಂದೂಗಳು  ಕೀಳಾಗಿ ನೋಡುತ್ತಿದ್ದಾರೆಂದು ಹಿಂದೂಗಳ ಪ್ರವಕ್ತನಾದ ನನ್ನನ್ನು ಕುರಿತು ಕ್ರೈಸ್ತಮತದವರು ಅಸೂಯೆಯಿಂದ ವಿರುದ್ಧವಾಗಿ ಮಾತನಾಡುತ್ತಾರೆ. ನಮ್ಮ ದೇವರು ದೊಡ್ಡವನು. ನಿಮ್ಮ ದೇವರು ಚಿಕ್ಕವನು ಎಂದು ಹಿಂದೂಗಳು ಎಂದರೆ, ನಮ್ಮ ದೇವರೇ ದೊಡ್ಡವನೆಂದು ಕ್ರೈಸ್ತರು ಎನ್ನುತ್ತಾರೆ. ಕ್ರೈಸ್ತಮತ ಪ್ರವಕ್ತನಾದ ಯೇಸುನನ್ನು ನೋಡಿದರೂ, ಆತನ ಹೆಸರನ್ನು ಕೇಳಿದರೂ ಹಿಂದೂಗಳು ಕೆಲವರು ಉರಿದುಬೀಳುತ್ತಾರೆ. ಹಾಗೆ ಹಿಂದೂಗಳ ದೇವರನ್ನು, ದೇವತೆಗಳನ್ನು ಕ್ರೈಸ್ತರು ಕಡಿಮೆ ಭಾವನೆಯಿಂದ ಮಾತನಾಡುತ್ತಾರೆ. ಹೀಗೆ ನಮ್ಮ ದೇವರು ದೊಡ್ಡವನೆಂದು ಕ್ರೈಸ್ತರೆಂದರೆ, ಹಿಂದೂಸಂಘದಲ್ಲಿನವರು ಕೆಲವರು ನಿಮ್ಮ ದೇವರು ದೇವರೇ ಅಲ್ಲವೆಂದು ಯೇಸುನನ್ನು ದೂಷಿಸುತ್ತಾರೆ. ಹಿಂದೂಗಳು ಕ್ರೈಸ್ತ ಪ್ರವಕ್ತನಾದ ಯೇಸುನನ್ನು ದೂಷಿಸಿದಂತೆಲ್ಲಾ, ಕ್ರೈಸ್ತರು ತಮ್ಮ ಬೈಬಲ್‌ನಲ್ಲಿನ ವಾಕ್ಯಗಳನ್ನು ಹೇಳುತ್ತಾ, ಅವರ ಮತಪ್ರಚಾರ ಮಾಡುತ್ತಾರೆ. ಜ್ಞಾನವನ್ನು ಬೋಧಿಸುತ್ತಾ ನಮ್ಮ ಮತದಲ್ಲಿ ರಕ್ಷಣೆ ಇದೆಯೆಂದು ಹೇಳುತ್ತಿರುವುದರಿಂದ, ದೇವತಾ ಭಕ್ತಿ ಹೊರತು ದೇವರ ಭಕ್ತಿ ಹಿಂದೂಮತದಲ್ಲಿ ಇಲ್ಲದಿರುವುದರಿಂದ, ಬಹಳ ಜನ ಹಿಂದೂಗಳು ಕ್ರೈಸ್ತರಾಗಿ ಬದಲಾಗಿ ಹೋಗುತ್ತಾರೆ. ಕೊನೆಗೆ ಹಿಂದೂಗಳು ತಮ್ಮ ಮತವನ್ನು ರಕ್ಷಿಸಿಕೊಳ್ಳುವ ಪ್ರಯತ್ನದಲ್ಲಿ ಮುಳುಗಿದ್ದರೆ, ಕ್ರೈಸ್ತರು ತಮ್ಮ ಮತವನ್ನು

ಬೆಳಸಿಕೊಳ್ಳುತ್ತಿದ್ದಾರೆ. ಪರಮತವೆಂದು ಹಿಂದೂಗಳು ಕ್ರೈಸ್ತಮತವನ್ನು, ಅದರ ಪ್ರವಕ್ತನನ್ನು ದೂಷಿಸಿದಾಗ, ಕ್ರೈಸ್ತರು ಹಿಂದೂಮತ ಮಾಯ (ಸಾತಾನ್) ಮತವೆಂದು ಹಿಂದೂಮತವನ್ನು, ಹಿಂದೂಗಳ ದೇವರುಗಳನ್ನು ದೂಷಿಸುತ್ತಾರೆ. ಈ ವಿಧವಾಗಿ ಮತ ದ್ವೇಷಗಳು ಏರ್ಪಟ್ಟು, ಅದರಿಂದ ಭೂಮಿಮೇಲೆ ಮತಹಿಂಸೆಗಳು ಏರ್ಪಡುತ್ತವೆ. ಭೂಮಿಮೇಲೆ ಮತಗಳಿಗೋಸ್ಕರ ಯುದ್ಧಗಳೆ ನಡೆಯುತ್ತವೆ. ಇವುಗಳಿಗೆಲ್ಲ ಮನುಷ್ಯ ಆಚರಿಸಬೇಕಾದ ಧರ್ಮಗಳ್ಯಾವೋ, ಮನುಷ್ಯ ತಿಳಿದುಕೊಳ್ಳಬೇಕಾದ ಜ್ಞಾನವೇನೋ, ಮತಗಳ ಹೆಸರುಗಳು ಇಟ್ಟುಕೊಂಡ ಮನುಷ್ಯರಿಗೆ ತಿಳಿಯದಹಾಗೆ ಹೋಗಿರುವುದೇ ಮುಖ್ಯ ಕಾರಣ. ಪ್ರತಿ ಮನುಷ್ಯ ಹುಟ್ಟಿದಾಗಿನಿಂದ ಯುಕ್ತವಯಸ್ಸಿನವರೆಗೂ ಬದುಕುವುದಕ್ಕಾಗಿ ಓದಿಕೊಂಡು, ಅದರ ನಂತರ ಧನಾರ್ಜನೆಯಲ್ಲಿ ಬಿದ್ದುಹೋಗಿ, ಉಳಿದ ಕಾಲದಲ್ಲಿ ಮತವನ್ನು ಮತಭಕ್ತಿಯನ್ನು, ಮತ ಪ್ರಚಾರವನ್ನು ಮಾಡುತ್ತಾ ನನ್ನ ಮತ ದೊಡ್ಡದು, ನನ್ನ ಮತ ದೊಡ್ಡದೆಂದು ದ್ವೇಷಗಳು ಬೆಳೆಸಿಕೊಳ್ಳುತ್ತಾರೆ. ಕ್ರೈಸ್ತರನ್ನು ನೋಡಿದರೆ ಹಿಂದೂಗಳು, ಹಿಂದೂಗಳನ್ನು ನೋಡಿದರೆ ಕ್ರೈಸ್ತರು ಒಬ್ಬರಿಗೊಬ್ಬರು ಅಜ್ಞಾನಿಗಳೆಂದುಕೊಳ್ಳುವ ಸ್ಥಿತಿ ಏರ್ಪಡುತ್ತದೆ. ಪ್ರತಿ ಮತದವನು ದೇವರ ಹೆಸರೇ ಹೇಳುತ್ತಾ, ದೇವರ ಹತ್ತಿರಕ್ಕೇ ಸೇರಬೇಕೆಂದು ಹೇಳಿದರೂ ಅವರವರ ಪ್ರವಕ್ತರು, ಅವರವರ ಮತಗಳು ಬೇರೆಬೇರೆಯಾಗಿರುವುದರಿಂದ ಅವರವರ ದೇವರು ಸಹ ಬೇರೆಬೇರೆಯೆಂದು ಹೇಳುವ ಕಾಲಬರುತ್ತದೆ.

ಈ ವಿಧವಾಗಿ ಭೂಮಿಮೇಲೆ ಕಲಿಯುಗದಲ್ಲಿ ಮತಗಳ ಹೆಸರಿನಿಂದ ಅಧರ್ಮಗಳು ಬೆಳೆದುಹೋಗುತ್ತವೆ. ಬೇರೆ ಮತಗಳು ಇಲ್ಲದ ದ್ವಾಪರಯುಗದಲ್ಲಿ ಇಂದೂಗಳಿಗೆ ಸಂಬಂಧಿಸಿದ ಧರ್ಮಗಳನ್ನೇ ನಾನು ಹೇಳಿದ್ದೇನೆ. ನಾನು ಹೇಳಿದ ಧರ್ಮಗಳು ಸರ್ವಮಾನವರಿಗು, ಸರ್ವಮತಗಳಿಗು ಸಂಬಂಧಿಸಿರುವ ವೆಂದು ಯಾರಿಗೂ, ಯಾವ ಮತದವರಿಗು ತಿಳಿಯದಂತೆ ಹೋಗಿರುವುದರಿಂದ, ಕ್ರೈಸ್ತರು ನಮ್ಮ ಜ್ಞಾನ, ನಮ್ಮ ಧರ್ಮಗಳು ಪ್ರತ್ಯೇಕವಾದವೆಂದು, ನಮ್ಮ ಪ್ರವಕ್ತ ಹೇಳಿರುವವು ಕೃಷ್ಣನು ಹೇಳಿರುವವು ಬೇರೆಯೆಂದು ಹೇಳಿಕೊಳ್ಳುತ್ತಾರೆ.

ದ್ವಾಪರಯುಗದಲ್ಲಿ ಕೃಷ್ಣನು ಹೇಳಿದ ಧರ್ಮಗಳನ್ನೇ ತಮ್ಮ ಪ್ರವಕ್ತ ಹೇಳಿದ್ದಾನೆಂದು ಯಾರೂ ಗುರುತಿಸಲಾರರು. ಇಂದೂ ಧರ್ಮಗಳನ್ನು ದೇವರು ಹೇಳಿದ್ದಾನೆಂದು, ಇಂದೂ ಧರ್ಮಗಳಿಲ್ಲದ ಮತ ಭೂಮಿಮೇಲೆ ಇಲ್ಲವೆಂದು ಯಾರೂ ಗ್ರಹಿಸಲಾರರು. ಇಂದೂಧರ್ಮಗಳು ದೈವಜ್ಞಾನ ತಿಳಿಯಬೇಕೆಂದುಕೊಳ್ಳುವ ಪ್ರತಿ ಮತಸ್ಥನಿಗೂ ಅಗತ್ಯವಾದವೇ. ಏಕೆಂದರೆ! ಅವರ ಮತ ಗ್ರಂಥಗಳಲ್ಲಿ ಏನು ಹೇಳಿದ್ದಾರೋ ಅವುಗಳೇ ನಾನು ಹೇಳಿದ ಇಂದೂ ಧರ್ಮಗಳು, ಇಂದೂ ಎಂದರೆ ದೈವ ಜ್ಞಾನ ಎಂದು ತಿಳಿಯದ ಪ್ರತಿ ಮತವೂ, ತಮ್ಮ ಮತಗಳಿಗೆ ಪ್ರತ್ಯೇಕವಾದ ಹೆಸರುಗಳು ಇಟ್ಟುಕೊಳ್ಳುತ್ತಾರೆ. ಕೊನೆಗೆ ದೈವಜ್ಞಾನ (ಇಂದೂತ್ವ) ತಿಳಿಯದ ಇಂದೂಗಳು ತಮ್ಮದು ಸಹ ಒಂದು ಮತವೆಂದು, ಅದರ ಹೆಸರನ್ನು ಹಿಂದೂ ಮತವೆಂದು ಹೇಳಿಕೊಳ್ಳುತ್ತಾರೆ. ನಾನು ಹೇಳಿದ ಧರ್ಮಗಳನ್ನು ತಿಳಿಯದೆ ವೇದಗಳನ್ನು ಆಶ್ರಯಿಸಿ, ನಾವು ಹಿಂದೂಗಳು ಎಂದು ಕೆಲವರು ಹೇಳಿದಾಗ, ಹಾಗೆಯೇ ನಾನು ಹೇಳಿದ ಧರ್ಮಗಳನ್ನೇ ತಮ್ಮ ಪ್ರವಕ್ತ ಹೇಳಿದ್ದಾನೆಂದು ತಿಳಿಯದೆ, ತಮ್ಮದು ಕ್ರೈಸ್ತ ಮತವೆಂದು ಕೆಲವರು ಹೇಳಿಕೊಳ್ಳುತ್ತಾರೆ. ನಾನು ಹೇಳಿದ ಧರ್ಮಗಳಲ್ಲಿ ಸಹ ಕೆಲವು ಅಧರ್ಮಗಳು ಬೆರೆತುಹೋಗಿ ಭಗವದ್ಗೀತೆಯಾಗಿ ನಿಮ್ಮಮುಂದೆ ನನ್ನ ಬೋಧನೆ ಇರುತ್ತದೆ. ನನ್ನ ಬೋಧನೆಯಾದ ಭಗವದ್ಗೀತೆಯಲ್ಲಿ ಸಹ ಅಧರ್ಮಗಳು ಬೆರೆತಿರುವುದರಿಂದ, ಅವುಗಳನ್ನೇ ಕೆಲವರು ಹಿಂದೂಗಳು ಆಶ್ರಯಿಸಿ, ನಾನು ಹೇಳಿದ ಧರ್ಮಗಳನ್ನು ಅರ್ಥ ಮಾಡಿಕೊಳ್ಳಲಾರರು. ಆ ವಿಧವಾಗಿ ಭಗವದ್ಗೀತೆ ಯಾರಿಗೂ ಅರ್ಥವಾಗದೆ ಹೋಗುತ್ತದೆ.

ಜಗತ್ತಿನಲ್ಲಿ ಅತೀ ದೊಡ್ಡ ಮತವಾಗಿ ಕ್ರೈಸ್ತಮತ ಹೆಸರುವಾಸಿಯಾದರೂ, ಆ ಮತ ಪ್ರವಕ್ತ ಹೇಳಿದ ಬೈಬಲ್ ಗ್ರಂಥದಲ್ಲಿ ಸಹ ಅಧರ್ಮಗಳು ಬೆರೆತುಹೋಗಿ ಕ್ರೈಸ್ತರು ಸಹ ದೈವಜ್ಞಾನವನ್ನು (ಇಂದೂತ್ವವನ್ನು) ತಿಳಿಯಲಾರರು. ಬೈಬಲನ್ನು ಓದಿದ ಪ್ರತಿ ಕ್ರೈಸ್ತನು, ಬೈಬಲನ್ನು ಬೋಧಿಸಿದ ಪ್ರತಿ ಬೋಧಕನು, ಅದರಲ್ಲಿರುವ ನನ್ನ ಧರ್ಮಗಳನ್ನು ತಿಳಿಯಲಾರರು. ಆದ್ದರಿಂದ ಕ್ರೈಸ್ತ ಪ್ರವಕ್ತನಾದ ಯೇಸು

ಪ್ರಜೆಗಳನುದ್ದೇಶಿಸಿ ಒಂದು ಮಾತು ಹೇಳಿಹೋಗುತ್ತಾನೆ **ನಾನು ಹೇಳಿದ ಧರ್ಮಗಳು ನಿಮಗೀಗ ಅರ್ಥವಾಗುವುದಿಲ್ಲ. ನನ್ನ ನಂತರ ಸ್ವಲ್ಪಕಾಲಕ್ಕೆ ಒಬ್ಬ ವ್ಯಕ್ತಿ ಬಂದು ನಾನು ಹೇಳಿದ ನನ್ನ ಮಾತುಗಳನ್ನೇ ವಿವರವಾಗಿ ಹೇಳುತ್ತಾನೆ. ಆಗ ನಾನು ಹೇಳಿದ ಮಾತುಗಳು ಅರ್ಥವಾಗುತ್ತವೆ ಎಂದು ಹೇಳಿದನು.** ಯಾವ ವ್ಯಕ್ತಿಯಾದರೆ ಬೈಬಲ್ ವಾಕ್ಯಗಳನ್ನು ವಿವರಿಸಿ ಹೇಳುತ್ತಾನೋ, ಅದೇ ವ್ಯಕ್ತಿ ಭಗವದ್ಗೀತೆಯಲ್ಲಿ ಶ್ಲೋಕರೂಪದಲ್ಲಿರುವ ನನ್ನ ಧರ್ಮಗಳನ್ನು ಸಹ ವಿವರಿಸಿ ಹೇಳುತ್ತಾನೆ. ಅಲ್ಲಿಯವರೆಗು ಭಗವದ್ಗೀತೆಯಾಗಲಿ, ಬೈಬಲ್ ಆಗಲಿ ಸರಿಯಾಗಿ ಯಾರಿಗೂ ಅರ್ಥವಾಗುವುದಿಲ್ಲ. ಇತ್ತ ಬೈಬಲನ್ನು ಅತ್ತ ಭಗವದ್ಗೀತೆಯನ್ನು ಏಕ ಕಾಲದಲ್ಲಿ ಹೇಳುವಾತನೇ ಎರಡು ಗ್ರಂಥಗಳಲ್ಲಿನ ಧರ್ಮಗಳು ಒಂದೇಯೆಂದು, ಆ ಎರಡು ಗ್ರಂಥಗಳನ್ನು ಒಬ್ಬನೇ ಹೇಳಿದ್ದಾನೆಂದು ಸಂಚಲನೆ ಮಾತುಗಳನ್ನು ಹೇಳುತ್ತಾನೆ. ಎರಡು ಗ್ರಂಥಗಳಲ್ಲಿಯೂ ದೇವರು ಹೇಳಿದ ಧರ್ಮಗಳೊಂದಿಗೆ, ಮನುಷ್ಯರು ಬರೆದ ಅಧರ್ಮಗಳು ಸಹ ಇವೆಯೆಂದು, ಅವುಗಳನ್ನು ಬಿಟ್ಟು ಧರ್ಮಗಳಿಗೆ ಮಾತ್ರವೇ ವಿವರವನ್ನು ಹೇಳುತ್ತಾನೆ. ಆ ವ್ಯಕ್ತಿ ಗುರುವಿನಂತಾಗಲಿ, ಸ್ವಾಮಿಯಂತಾಗಲಿ ಚಲಾವಣೆ ಆಗುವುದಿಲ್ಲ. ಯಾವ ಆಧಾರವಿಲ್ಲದ ಆತನನ್ನು ಗುರುತಿಸುವುದು ಬಹಳಕಷ್ಟ" ಎಂದು ಕೃಷ್ಣನು ಬೇಟೆಗಾರನಿಗೆ ಹೇಳಿದ್ದಾನೆ.

ಇಲ್ಲಿ ನಾವು ಆಲೋಚಿಸುವಂತಹ ವಿಷಯವೇನೆಂದರೆ ದೈವಧರ್ಮಗಳನ್ನು ಗೀತಾರೂಪದಲ್ಲಿ ಧನುಸ್ಸು, ಬಾಣಗಳು ಧರಿಸಿದ ಅರ್ಜುನನಿಗೆ ಮಾತ್ರ ಹೇಳಿದ್ದಾನೆ. ಅಲ್ಲಿ ಕೃಷ್ಣನು ಅರ್ಜುನನು ಹೊರತು ಮೂರನೆಯ ವ್ಯಕ್ತಿ ಇಲ್ಲ. ಮೇಲಾಗಿ ಅರ್ಜುನನು ಧರ್ಮಗಳನ್ನು ಕುರಿತು ಕೇಳಲೂ ಇಲ್ಲ. ದಾರಿಯಲ್ಲಿ ಹೋಗುವವನಿಗೆ ಕರೆದು ಮಗಳನ್ನು ಕೊಟ್ಟಂತೆ. ಧರ್ಮಗಳ ಮೇಲೆ ಧ್ಯಾಸವಿಲ್ಲದ ಅರ್ಜುನನಿಗೆ ಧರ್ಮಗಳನ್ನು ಕುರಿತು ಕೃಷ್ಣನು ಹೇಳಿದ್ದಾನೆ. ಹಾಗೆಯೇ ಕಲಿಯುಗದಲ್ಲಿ ನಡೆಯುವಂತಹ ಭವಿಷ್ಯತ್ತನ್ನು ಕುರಿತು, ಕ್ರೈಸ್ತ ಮತವನ್ನು ಕುರಿತು, ಇಂದೂ ಮತವು ಕ್ಷೀಣಿಸಿ ಹೋಗುವುದನ್ನು ಕುರಿತು, ಧನುಸ್ಸು

ಬಾಣಗಳು ಧರಿಸಿರುವ ಬೇಟೆಗಾರನಿಗೆ ಹೇಳಿದ್ದಾನೆ. ಅರ್ಜುನನಿಗೆ ಗೀತಾ ಜ್ಞಾನವನ್ನು ಹೇಳಿದಹಾಗೆ, ಭವಿಷ್ಯತ್ತನ್ನು ಕುರಿತು ಕೇಳದಿದ್ದರೂ ಬೇಟೆಗಾರನಿಗೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಹೇಳಿದ್ದಾನೆ. ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಹೇಳಿದಾಗ ಅಲ್ಲಿ ಕೃಷ್ಣನು, ಬೇಟೆಗಾರ ಹೊರತು ಮೂರನೆಯ ವ್ಯಕ್ತಿ ಯಾರೂ ಇಲ್ಲ. ಯುದ್ಧರಂಗದಲ್ಲಿ ಗೀತೆಯನ್ನು ಹೇಳಿದಾಗ ಕೃಷ್ಣನು ಅರ್ಜುನನಿಗೆ ಹೇಳಿದಾಗ, ನಂತರ ಅರ್ಜುನನು ವ್ಯಾಸನಿಗೆ ಹೇಳುವುದರಿಂದ ಗೀತೆ ಅರ್ಜುನನ ಮೂಲಕ ಹೊರಬಂದಿದೆಯೆಂದು ಹೇಳಬಹುದು. ಆದರೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕೃಷ್ಣನು ಬೇಟಗಾರನಿಗೆ ಹೇಳಿದಾಗ ಅಲ್ಲಿ ಮೂರನೆಯ ವ್ಯಕ್ತಿ ಇಲ್ಲ. ಹೇಳಿದ ಕೃಷ್ಣನು ಕೂಡಲೇ ಮರಣಿಸಿದ್ದಾನೆ. ಇನ್ನೂ ಬೇಟೆಗಾರ ಮಾತ್ರ ಉಳಿದಿದ್ದಾನೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು ಒಬ್ಬ ಬೇಟೆಗಾರನ ಮೂಲಕವೇ ಹೊರಗೆ ಬರಬೇಕು. ಆದರೆ ಬೇಟೆಗಾರನು ಸಹ ತಾನು ಮಾಡಿದ ತಪ್ಪಿಗೆ ಆಗಲೇ ನಿರಾಹಾರದೀಕ್ಷೆ ಮಾಡಿ ಅಲ್ಲಿಯೇ ಕೃಷ್ಣನ ಮುಂದೆಯೇ ಮರಣಿಸಿದ್ದಾನೆಂದು ಬರೆದಿದ್ದಾರೆ. ಇಲ್ಲಿ ಪ್ರತ್ಯೇಕವಾಗಿ ನಾನು ಕೇಳುವ ಪ್ರಶ್ನೆ ಏನೆಂದರೆ! ನಿನ್ನ ತಪ್ಪು ಏನು ಇಲ್ಲವೆಂದು, ಎಲ್ಲಾ ನನ್ನ ಕರ್ಮಪ್ರಕಾರ ನಡೆದಿದೆಯೆಂದು ಕೃಷ್ಣನು ಬೇಟೆಗಾರನೊಂದಿಗೆ ಹೇಳಿದರೂ, ಆತನು ಕೇಳದಂತೆ ನಾನು ಮಾಡಿದ ತಪ್ಪಿಗೆ ಶಿಕ್ಷೆ ಇರಬೇಕೆಂದು, ನಿರಾಹಾರದೀಕ್ಷೆ ಮಾಡಿ ಕೂಡಲೇ ಮರಣಿಸಿದ್ದಾನೆಂದು, ನಂತರ ಕೃಷ್ಣನ ರಥಸಾರಥಿಯಾದ ದಾರಕನು ಅಲ್ಲಿಗೆ ಬಂದಿದ್ದಾನೆಂದು ಬರೆದಿದ್ದಾರೆ. ನಿರಾಹಾರದೀಕ್ಷೆ ಮಾಡಿ ಒಬ್ಬ ಮನುಷ್ಯ ಮರಣಿಸಬೇಕೆಂದರೆ ಕನಿಷ್ಟ 40 ದಿನಗಳಾದರೂ ಬೇಕಾಗುತ್ತದೆ. ಅಂತಹದ್ದು ನಿರಾಹಾರದೀಕ್ಷೆ ಮಾಡಿ ನಿಮಿಷಕ್ಕೇ ಮರಣಿಸಿದ್ದಾನೆಂದು ಹೇಳುವುದು ಸುಳ್ಳು ಅಲ್ಲವಾ?

ಭಾಗವತದಲ್ಲಿ ಕೃಷ್ಣನನ್ನು ಬಾಣದಿಂದ ಬೇಟೆಗಾರನು ಹೊಡೆದಿದ್ದಾನೆಂದು ಬರೆದವರು, ನಡೆದ ಸಂಘಟನೆಯನ್ನು ನೋಡಿ ಕೃಷ್ಣನು ನಿವಾರಿಸಿದರೂ ಕೇಳದಂತೆ ನಿರಾಹಾರ ದೀಕ್ಷೆಯಿಂದ ಮರಣಿಸಿದ್ದಾನೆಂದು ಬರೆದಿದ್ದಾರೆ. ಕೃಷ್ಣನು,

ಬೇಟೆಗಾರನು ಹೊರತು ಅಲ್ಲಿ ಯಾರಿಲ್ಲದ ಸಮಯದಲ್ಲಿ ಏನು ನಡೆದಿದೆಯೋ, ಏನು ಮಾತನಾಡಿದ್ದಾರೋ ಯಾರಿಗೂ ತಿಳಿದಿಲ್ಲ. ನಿಜಕ್ಕೆ ಬೇಟೆಗಾರನು ಮರಣಿಸಲಿಲ್ಲ. ಬೇಟೆಗಾರನು ದುಃಖಪಟ್ಟಾಗ ಕೃಷ್ಣನು ಎಲ್ಲಾ ಕರ್ಮಪ್ರಕಾರವೇ ನಡೆದಿದೆಯೆಂದು ಸಮಾಧಾನಪಡಿಸಿ ನಂತರ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತನ್ನು ಕುರಿತು ಕೃಷ್ಣನು ಬೇಟೆಗಾರನಿಗೆ ಹೇಳಿ, ಈ ವಿಷಯವನ್ನು ನಾನು ನಿನಗೆ ಹೊರತು ಯಾರಿಗೂ ಹೇಳಲಿಲ್ಲ ಎಂದಿದ್ದಾನೆ. ಕೃಷ್ಣನು ಹೇಳಿದ ಕೊನೆಯ ಸಂದೇಶವಾದ ಕಲಿಯುಗದಲ್ಲಿ ಆಧ್ಯಾತ್ಮಿಕ ಭವಿಷ್ಯತ್ತನ್ನು ಕೇಳಿದ ಬೇಟೆಗಾರನು, ನಾನೆಷ್ಟೋ ಅದೃಷ್ಟವಂತನು ಎಂದು ಸಂತೋಷಪಟ್ಟಿದ್ದಾನೆ. ನನ್ನ ಜೀವನದ ಅಂತ್ಯ ಭಾಗದಲ್ಲಿ ನಾನು ಹೇಳುವ ದೊಡ್ಡ ರಹಸ್ಯ ಇದು. ಇದನ್ನು ನೀನು ಹೊರತು ಕೇಳಿದವನು ಯಾರೂ ಇಲ್ಲವೆಂದು ಕೃಷ್ಣನು ಹೇಳಿದ ಮಾತನ್ನನುಸರಿಸಿ ನಾನು ದೊಡ್ಡವನೆಂದು ಬೇಟೆಗಾರನು ಅಂದುಕೊಂಡಿದ್ದಾನೆ. ಯುದ್ಧರಂಗದಲ್ಲಿ ಕೃಷ್ಣನ ಮೂಲಕ ಗೀತೆಯನ್ನು ಕೇಳಿ, ಈ ರಹಸ್ಯ ನಿನಗೆ ಹೊರತು ಯಾರಿಗೂ ತಿಳಿಯದೆಂದು ಕೃಷ್ಣನು ಹೇಳಿದಾಗ, ಅರ್ಜುನನು ತನಗೆ ತಾನು ದೊಡ್ಡದಾಗಿ ಊಹಿಸಿಕೊಂಡಂತೆ ಕೃಷ್ಣನು ಹೇಳಿದ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು, ದೈವಜ್ಞಾನ ರಹಸ್ಯವನ್ನು ಕೇಳಿದ ಬೇಟೆಗಾರನು ಸಹ ಅರ್ಜುನನು ಅಂದುಕೊಂಡಂತೆ ಅಂದುಕೊಂಡಿದ್ದಾನೆ. ಆ ಕಾಲದಲ್ಲಿ ಯುದ್ಧ ಮುಗಿದುಹೋದ ನಂತರ ಅರ್ಜುನನು ವ್ಯಾಸನಿಗೆ ಹೇಳಿದಾಗ, ಅದು ವ್ಯಾಸನ ಮೂಲಕ ಎಲ್ಲರಿಗೂ ತಿಳಿದಿದೆ. ಕೃಷ್ಣನು ಹೇಳಿದ ಗೀತೆಯನ್ನು ಅರ್ಜುನನು ವ್ಯಾಸನಿಗೆ ಹೇಳಿದಹಾಗೆ, ಭಾರತದಲ್ಲಾಗಲಿ, ಭಾಗವತದಲ್ಲಾಗಲಿ ಬರೆಯಲಿಲ್ಲ. ಆದರೂ ಹೀಗೇ ನಡೆದಿದೆ, ಅರ್ಜುನನೇ ಸ್ವತಃವಾಗಿ ವ್ಯಾಸನಿಗೆ ಹೇಳಿದ್ದಾನೆಂದು ನಾವು ಹೇಳಿದ್ದೇವೆ. ಇಲ್ಲಿ ಬೇಟೆಗಾರನಿಗೆ ಕೃಷ್ಣನು ಹೇಳಿದ ವಿಷಯ ಸಹ ಭಾರತ, ಭಾಗವತಗಳಲ್ಲಿ ಬರೆಯಲಿಲ್ಲ. ಆದರೂ ಈ ವಿಧವಾಗಿ ನಡೆದಿದೆಯೆಂದು ನಾವೇ ಹೇಳುತ್ತಿದ್ದೇವೆ. ಈ ನನ್ನ ಮಾತುಕೇಳಿದ ಕೆಲವರು ಪಂಡಿತರು, ಕವಿಗಳು ಈತನು ಯಾರು? ಸ್ವತಃವಾಗಿ ಹೀಗೇ ನಡೆದಿದೆಯೆಂದು ಹೇಳುವುದಕ್ಕೆ? ಎಂದು ಕೇಳಬಹುದು.

ಇದಕ್ಕೆ ಉತ್ತರವನ್ನು ನಂತರ ಹೇಳುತ್ತೇವೆ, ಆದರೆ ಈ ಪ್ರಶ್ನೆಗಳಲ್ಲಿ ಈತನು ಯಾರು? ಎಂಬ ಪ್ರಶ್ನೆ ನನಗೆ ಬಹಳ ಇಷ್ಟವಾಗಿದೆ.

ನಾನು ಸತ್ಯವನ್ನು ಹೇಳಿದರೆ ವಿಶ್ವಾಸಿಸದವರು ನಿರಾಹಾರದೀಕ್ಷೆಯಿಂದ ಬೇಟೆಗಾರನು ಮರಣಿಸಿದ್ದಾನೆಂದಾಗ, ನಿರಾಹಾರದೀಕ್ಷೆಗೆ ನಿಮಿಷಗಳಲ್ಲಿ ಯಾರೂ ಮರಣಿಸುವುದಿಲ್ಲ ಅಲ್ಲವೆ! ಎಂದು ಏಕೆ ಕೇಳಲಾರದೆ ಹೋಗಿದ್ದಾರೆ? ಕೃಷ್ಣನು ರಕ್ತಸ್ರಾವದಿಂದ ಮರಣಿಸಿದ್ದಾನೆಂಬ ಸತ್ಯವನ್ನು ನಾವು ಹೇಳಿದರೆ ನಂಬಲಾರದವರು, ಕೃಷ್ಣನು ರಥವನ್ನೇರಿ ವೈಕುಂಠಕ್ಕೆ ಹೋಗಿದ್ದಾನೆಂದು ಭಾಗವತದಲ್ಲಿ ಬರೆದ ಮಾತುಗಳನ್ನು ಹೇಗೆ ನಂಬಿದ್ದಾರೆಂದು ಕೇಳುತ್ತಿದ್ದೇವೆ. ನಿರಾಹಾರದೀಕ್ಷೆಯಿಂದ ನಿಮಿಷಗಳ ವ್ಯವಧಿಯಲ್ಲಿ ಮರಣಿಸುತ್ತಾನೆಂಬ ಮಾತಾಗಲಿ, ಕೃಷ್ಣನು ರಥದ ಮೇಲೆ ವೈಕುಂಠಕ್ಕೆ ಹೋಗಿದ್ದಾನೆಂಬುವುದಾಗಲಿ ಪೂರ್ತಿ ಅಶಾಸ್ತ್ರೀಯ, ಅಸತ್ಯ. ಕಲ್ಪಿತ ಪುರಾಣಗಳನ್ನು ಕುರುಡರಹಾಗೆ ನಂಬುವವರು ಆಧಾರಪೂರಿತ ವಿಷಯಗಳನ್ನು ಏಕೆ ನಂಬುತ್ತಿಲ್ಲವೆಂದು ನಾವು ಕೇಳುತ್ತಿದ್ದೇವೆ. ಕೃಷ್ಣನು ಬೇಟೆಗಾರನಿಗೆ ಇನ್ನೂ ಕೆಲವು ವಿಷಯಗಳನ್ನು ಹೇಳಿದ್ದಾನೆ. ಆ ವಿಷಯಗಳು ಕ್ರೈಸ್ತ, ಹಿಂದೂಮತಗಳಿಗು ಎರಡಕ್ಕು ಕಣ್ತೆರೆಸುವಂತಹ ವಿಷಯಗಳಾಗಿ ಇವೆ. ಕೃಷ್ಣನು ದೇವರ ಧರ್ಮಗಳನ್ನು ತಿಳಿದುಪಡಿಸುವುದಕ್ಕೆ ಅವತರಿಸಿ ಬಂದಿದ್ದಾನೆ. ದ್ವಾಪರಯುಗ ಅಂತ್ಯದಲ್ಲಿ ದೈವಧರ್ಮಗಳನ್ನು ಭಾರತದೇಶದಲ್ಲಿ ತಿಳಿಸಿದ್ದಾನೆ. ಹಾಗೆಯೇ ಕಲಿಯುಗ ಪ್ರಥಮದಲ್ಲಿಯೇ ಬಂದು ಮತ್ತೊಂದು ಬಾರಿ ಧರ್ಮಗಳನ್ನು ಇತರ ದೇಶದಲ್ಲಿ ತಿಳಿಸುತ್ತೇನೆಂದು ಹೇಳಿದ್ದಾನೆ. ಇಸ್ರಾಈಲ್ ದೇಶದಲ್ಲಿ ಯೇಸು ಆಗಿ ಉದ್ಭವಿಸಿ ಧರ್ಮಗಳನ್ನು ಹೇಳಿಹೋಗುತ್ತೇನೆಂದು, ಅವಶ್ಯಕತೆಯನ್ನು ಅನುಸರಿಸಿ ನಂತರ ಸಹ ಬರುತ್ತೇನೆಂದು ಹೇಳಿದ್ದಾನೆ. ಬೇಟೆಗಾರನನ್ನು ಅಡ್ಡ ಇಟ್ಟುಕೊಂಡು ಹೇಳಿದ ಮಾತುಗಳು ಇಂದಿಗೂ ಸತ್ಯಗಳಾಗಿ ಕಾಣಿಸುತ್ತಿವೆ. ಇನ್ನೂ ಆತನು ಹೇಳಿದ ಮಾತುಗಳು ಹೀಗಿವೆ. "ಕೃಷ್ಣನಾಗಿ ಬಂದಿರುವ ನಾನು ಕಲಿಯುಗ ಪ್ರಥಮಾಂಕದಲ್ಲಿಯೇ ಯೇಸು ಆಗಿ ಬರುತ್ತೇನೆ. ಹಾಗೆ ಬಂದಿರುವ ನನ್ನನ್ನು ಯಾರೂ

ಗುರುತಿಸಲಾರರು. ಈಗ ಹೇಳಿದ ಗೀತೆಯಾಗಲಿ, ಆಗ ಹೇಳುವ ವಾರ್ತೆಯಾಗಲಿ ಎರಡೂ ನನ್ನ ಧರ್ಮಗಳನ್ನೇ ತಿಳಿಸುತ್ತವೆ. ಎಲ್ಲಿಯೂ ಯಾವ ವಾಕ್ಯವೂ ಬೇಧ ಹೊಂದಿರುವುದಿಲ್ಲ. ನಾನೇ ಯೇಸು, ಯೇಸುವೇ ನಾನು ಆದರೂ ಶರೀರಗಳು, ಹೆಸರುಗಳು ಬೇರೆಯಾದರೂ ಇಬ್ಬರೂ ಒಬ್ಬರೇ ಎಂದು ಯಾರಿಗೂ ತಿಳಿದಿಲ್ಲ. ನನ್ನ ಬೋಧನೆ, ಯೇಸು ಬೋಧನೆ ಎರಡೂ ಒಂದೇ ಆದರೂ, ಗ್ರಂಥಗಳು ಅವುಗಳ ಹೆಸರುಗಳು ಬೇರೆಬೇರೆಯಾದರೂ, ಎರಡೂ ಒಂದೇಯೆಂದು ಯಾರೂ ಗುರುತಿಸಲಾರರು. ಅಷ್ಟೇಅಲ್ಲದೆ ನಾನು ಹೇಳಿದ ಗೀತೆ, ಯೇಸು ಹೇಳಿದ ನಾಲ್ಕು ಸುವಾರ್ತೆಗಳು ಪುನಃ ವಿವರವಾಗಿ ಮತ್ತೊಬ್ಬ ವ್ಯಕ್ತಿ ಹೇಳುವವರೆಗು ಯಾರಿಗೂ ಅರ್ಥವಾಗುವುದಿಲ್ಲ. ಆ ವ್ಯಕ್ತಿಯನ್ನು ಕುರಿತು ಯೇಸು ಹೇಳಿದ ವಾರ್ತೆಗಳಲ್ಲಿ ಆದರಣಕರ್ತ ಎಂದು ಬರೆಯಲ್ಪಟ್ಟಿರುತ್ತದೆ. ಯೇಸು ಹೇಳಿದ "ಆದರಣಕರ್ತ" ಎಂಬ ಹೆಸರಿನಲ್ಲಿನ ಮೊದಲ ಅಕ್ಷರ, ಕೊನೆಯ ಅಕ್ಷರ ಎರಡು ಅಕ್ಷರಗಳು ಮೊದಲನೆಯದು ಮೊದಲಿನಲ್ಲಿಯೂ, ಕೊನೆಯದು ಕೊನೆಯಲ್ಲಿಯೂ ಇರುವ ಹೆಸರು ಆತನಿಗಿರುತ್ತದೆ. ಆ......ರ್ತ ಎಂಬ ಎರಡಕ್ಷರಗಳ ಹೆಸರು ಹೊಂದಿದವನೇ ನಾನು ಹೇಳಿದ ಬೋಧನೆಯನ್ನೂ, ಹಾಗೆಯೇ ಯೇಸು ಹೇಳಿದ ವಾರ್ತೆಗಳನ್ನೂ ಏಕ ಕಾಲದಲ್ಲಿ ವಿವರಿಸಿ ಹೇಳುತ್ತಾನೆ. ಹಾಗೆ ಹೇಳುವವನೇ ಕಾಲಜ್ಞಾನವನ್ನು ಹೇಳಿದ ವೀರಬ್ರಹ್ಮಯ್ಯ ನವರಿಗೂ, ಸಮಸ್ತ ಮಾನವರಿಗೂ ಗುರುವಾಗುತ್ತಾನೆ.

ಯೇಸುಪ್ರಭುವನ್ನು ವಿಶ್ವಾಸಿಸಿದವನು ನನ್ನನ್ನು(ಕೃಷ್ಣನನ್ನು) ವಿಶ್ವಾಸಿಸುವುದಿಲ್ಲ. ಹಾಗೆಯೇ ಗೀತೆಯನ್ನು ಓದಿದವನು ಯೇಸುನನ್ನು ವಿಶ್ವಾಸಿಸುವುದಿಲ್ಲ. ಇಲ್ಲಿ ನಾನು ಅಲ್ಲಿ ಯೇಸು ಉತ್ತರ ದಕ್ಷಿಣ ಧೃವಗಳಂತೆ ಕಾಣಿಸುತ್ತಿರುವುದರಿಂದ ಹಿಂದೂಗಳು ಕ್ರೈಸ್ತರನ್ನು, ಕ್ರೈಸ್ತರು ಹಿಂದೂಗಳನ್ನು ಅಸಹ್ಯಿಸಿಕೊಳ್ಳುವ ಸ್ಥಿತಿಯಲ್ಲಿ ಇರುತ್ತಾರೆ. ಆ ಸಮಯದಲ್ಲಿ ಯೇಸು ಹೇಳಿದ ಆದರಣಕರ್ತ ಹೊರತು ಯಾರೂ ಎರಡು ಮತಗಳಿಗು ಸಮಾಧಾನಗಳು ಹೇಳಲಾರರು. ಹಾಗೆಯೇ ಸಮನ್ವಯಪಡಿಸಲಾರರು. ಕ್ರೈಸ್ತರಲ್ಲಿ ಆದರಣಕರ್ತ,

ಹಿಂದೂಗಳಲ್ಲಿ ಆ........ರ್ತ ಆದವನು ಒಬ್ಬನೇ. ಆ ಒಬ್ಬನೇ ಎರಡು ಮತಗಳಲ್ಲಿನ ಯೇಸು ಹೇಳಿದ ವಾಕ್ಯಗಳಿಗು, ನಾನು ಹೇಳಿದ ಗೀತೆಗು ಸರಿಯಾದ ಭಾವವನ್ನು ಹೇಳಿ, ಎರಡು ಬೋಧನೆಗಳನ್ನು ಒಂದಾಗಿಯೇ ತೋರಿಸುತ್ತಾನೆ. ಎರಡು ಮತಗಳಲ್ಲಿ ಹೇಳಿದ ನನ್ನನ್ನು, ಯೇಸುನನ್ನು ಒಂದಾಗಿಯೇ ತೋರಿಸುತ್ತಾನೆ. ನಾನು ಮೂರು ಸಾವಿರ ವರ್ಷಗಳ ನಂತರ ಹುಟ್ಟಿ, ಈ ಜನ್ಮದಲ್ಲಿ ಹೇಳಿರುವುದು ಪುನಃ ಆಗ ಹೇಳುತ್ತೇನೆ. ಹಾಗೆ ಹೇಳಿದ ನಾನೇ, ಯೇಸು ಹೆಸರಿನಿಂದ ಸ್ವಲ್ಪಕಾಲವಿದ್ದು ಹೋಗುತ್ತೇನೆ. ನಂತರ ಸ್ವಲ್ಪ ಕಾಲಕ್ಕೆ ಬಂದವನೇ ಎರಡು ಜನ್ಮಗಳಲ್ಲಿ ಇರುವುದು ನಾನೇಯೆಂದು, ಹೇಳಿರುವುದು ನಾನೇಯೆಂದು ತಿಳಿಸುತ್ತಾನೆ. ಹಾಗೆ ಹೇಳುವುದರಿಂದ ಆತನು ಇತ್ತ ಹಿಂದೂಗಳಿಗು, ಅತ್ತ ಕ್ರೈಸ್ತರಿಗು ವಿರೋಧಿಯಾಗಿ ಕಾಣಿಸುತ್ತಾನೆ. ಸಮಾಜದಲ್ಲಿ ಎಷ್ಟು ವಿರುದ್ಧತೆ ಬಂದರೂ ನನ್ನ ಕೆಲಸ ಇದೇಯೆನ್ನುವಂತೆ ಆತನು ಮಾತ್ರ ಯಾರಿಗೂ ಜಗ್ಗದೆ ತಾನು ಹೇಳಬೇಕಾಗಿರುವುದು ಹೇಳಿ ಹೋಗುತ್ತಾನೆ. ಎರಡು ಬೋಧನೆಗಳನ್ನೂ ವಿವರಿಸಿ ಹೇಳುವವನು ಪ್ರತ್ಯೇಕಿಸಿ ಎರಡು ಮತಗಳಲ್ಲಿ ಇಲ್ಲಿ ನಾನು, ಅಲ್ಲಿ ಯೇಸು ಹೇಳದೆ ಬಿಟ್ಟುಹೋದ ಬೋಧನೆಗಳನ್ನು ತಿಳಿಸುತ್ತಾನೆ. ಅಷ್ಟೇಅಲ್ಲದೆ ಆದಿಯಿಂದ ತಿಳಿಯದ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಸಿ, ಆತನ ಪ್ರತ್ಯೇಕತೆ ಏನೊ ಇತರರಿಗೆ ಅರ್ಥವಾಗುವಂತೆ ಮಾಡಿದರೂ, ಆತನನ್ನು ಯಾರೂ ಗುರುತಿಸಲಾರರು. ಮಾನವನಿಗೆ ಬೇಕಾದ ಜ್ಞಾನವನ್ನು ನಾನು ಒಂದು ವಿಧಾನದಿಂದ ಹೇಳಿದಾಗ, ಯೇಸು ಅದನ್ನೇ ಮತ್ತೊಂದು ವಿಧವಾಗಿ ಹೇಳಿದಾಗ, ಎರಡೂ ಒಂದೇಯೆಂದು ಹೇಳಿದ ಆದರಣಕರ್ತ, ಎರಡನ್ನು ವಿವರಿಸಿ ಹೇಳುತ್ತಾ, ಎರಡರಲ್ಲಿ ಇರುವುದನ್ನೇ ತನ್ನ ವಿಧಾನದಿಂದ ಹೇಳಿ ಸಂಪೂರ್ಣಮಾಡುತ್ತಾನೆ." ಎಂದು ಹೇಳಿದ್ದಾನೆ. ಕೃಷ್ಣನು ಹೇಳಿದ ವಿಧಾನವನ್ನು ನೋಡಿದರೆ ಬರುವ ಮೂರನೆಯವನು ಹೇಗೆ ಇರುತ್ತಾನೋ ಸ್ವಲ್ಪ ಅರ್ಥವಾಗುತ್ತದೆ.

ಮನುಷ್ಯ ಬದುಕುವುದಕ್ಕೆ ಆಹಾರ ತಿನ್ನಬೇಕು. ಆಹಾರದಲ್ಲಿ ನಾವು ಅನ್ನವನ್ನು ತಿನ್ನುತ್ತಿದ್ದೇವೆ. ಅನ್ನವನ್ನು ಒಂದನ್ನೇ ತಿಂದರೂ ಹಸಿವು ತೀರುತ್ತದೆ.

ಆದರೆ ಅನ್ನದೊಳಗೆ ಸಾರನ್ನು ಬೆರೆಸಿಕೊಂಡು ತಿಂದರೆ ರುಚಿಯಾಗಿರುತ್ತದೆ. ಅನ್ನದೊಳಗೆ ಸಾರನ್ನು ಬೆರೆಸಿಕೊಂಡು ತಿಂದು ಹಸಿವು ತೀರಿಸಿಕೊಳ್ಳುವವರು ಬಹಳಜನ ಇದ್ದರೂ, ಸ್ವಲ್ಪಜನ ಅನ್ನವನ್ನು ಸಾರಿನೊಂದಿಗೆ ತಿಂದನಂತರ ಕೊನೆಯಲ್ಲಿ ಮಜ್ಜಿಗೆಯೊಂದಿಗೆ ತಿನ್ನುತ್ತಾರೆ. ಹಾಗೆ ಮಜ್ಜಿಗೆಯೊಂದಿಗೆ ತಿಂದರೆ ಪೂರ್ತಿ ತೃಪ್ತಿಯಾಗಿ ತಿಂದಂತಾಗುತ್ತದೆ. ಈ ವಿಧವಾಗಿ ಆಹಾರವನ್ನು ಮೂರು ಭಾಗಗಳಾಗಿ ಹೇಳಿಕೊಳ್ಳಬಹುದು. ಒಂದು ಅನ್ನ, ಎರಡು ಸಾರುಗಳು, ಮೂರು ಮಜ್ಜಿಗೆ. ಈ ಮೂರನ್ನು ಸಂಪೂರ್ಣವಾದ ಆಹಾರವೆಂದು ಹೇಳಬಹುದು. ಅನ್ನವನ್ನು, ಸಾರನ್ನು, ಮಜ್ಜಿಗೆಯನ್ನು ಮೂರನ್ನು ತಿಂದವನು ಸಂಪೂರ್ಣ ಆರೋಗ್ಯದಿಂದ ಇರುತ್ತಾನೆ. ಈ ಮೂರು ಆಹಾರ ಭಾಗಗಳಲ್ಲಿಯೂ ಪೋಷಕಪದಾರ್ಥಗಳು ಸಂಪೂರ್ಣವಾಗಿ ಇರುವುದರಿಂದ ಮೂರು ಭಾಗಗಳ ಆಹಾರವನ್ನು ತಿಂದವನು ಶರೀರದಲ್ಲಿ ತೃಪ್ತಿಯಾಗಿ ಆರೋಗ್ಯದಿಂದ ಜೀವಿಸುತ್ತಾನೆ. ಅನ್ನ, ಸಾರು, ಮಜ್ಜಿಗೆಯನ್ನು ಕುರಿತು ಈಗ ಹೇಳಿಕೊಳ್ಳಬೇಕಾದ ಅವಶ್ಯಕತೆ ಏನು ಬಂದಿದೆಯೆಂದು ಕೆಲವರಂದುಕೊಳ್ಳಬಹುದು. ಇದನ್ನು ಉಪಮಾನವಾಗಿ ಹೇಳುತ್ತಿದ್ದೇವೆ. ದ್ವಾಪರಯುಗದಲ್ಲಿ ಕೃಷ್ಣನು ಗೀತೆಯನ್ನು ಹೇಳಿದ್ದಾನೆ. ಗೀತೆಯನ್ನು ಆಧಾರ ಮಾಡಿಕೊಂಡು ಮುಂದಕ್ಕೆ ಹೋಗುವವರಿದ್ದರೂ, ಕಲಿಯುಗದಲ್ಲಿ ಯೇಸು ಸಹ ಜ್ಞಾನವನ್ನು ಹೇಳಿದ್ದಾನೆ. ಯೇಸು ಹೇಳಿದ ಜ್ಞಾನವನ್ನು ಆಧಾರ ಮಾಡಿಕೊಂಡು ಹೋಗುವವರು ಸಹ ಎಷ್ಟೋಜನ ಇದ್ದಾರೆ. ಈ ಎರಡು ಜ್ಞಾನಗಳನ್ನು ಆಹಾರದಲ್ಲಿನ ಎರಡು ಭಾಗಗಳಾಗಿ ಹೋಲಿಸಿ ನೋಡಿಕೊಳ್ಳೋಣ. ಕೃಷ್ಣನು ಹೇಳಿದ ಗೀತಾಜ್ಞಾನವನ್ನು ಆಹಾರದಲ್ಲಿ ಒಂದನೆಯದಾದ ಅನ್ನವಾಗಿ ಹೋಲಿಸಿಕೊಳ್ಳೋಣ. ಅನ್ನ ಆಹಾರದಲ್ಲಿ ಮುಡಿಪದಾರ್ಥವಂತಹದು. ಅನ್ನ ಒಂದೇ ಬಣ್ಣಹೊಂದಿ, ಒಂದೇ ರುಚಿ ಹೊಂದಿರುತ್ತದೆ. ಅನ್ನವನ್ನು ಒಂದನ್ನೇ ತಿನ್ನ ಬೇಕೆಂದರೇ ಸ್ವಲ್ಪ ಕಷ್ಟವಾಗಿರುತ್ತದೆ. ಅನ್ನ ಒಂದನ್ನೇ ಹೊಟ್ಟೆತುಂಬಾ ತಿನ್ನಬಹುದು. ಹಾಗೆ ಒಂದು ಅನ್ನವನ್ನು ಹೊಟ್ಟೆತುಂಬಾ ತಿಂದರೂ ಮನುಷ್ಯ ಬದುಕಬಹುದು. ಆದರೆ ತಿನ್ನುವ ಆಹಾರ ರುಚಿಯಾಗಿರದೆ, ದೇವರು ಕೃಷ್ಣನನ್ನು ಕಳುಹಿಸಿ ಗೀತಾಜ್ಞಾನವನ್ನು ಹೇಳಿಸಿದಂತೆ, ಯೇಸುನನ್ನು ಕಳುಹಿಸಿ ವಾರ್ತಾ

ಜ್ಞಾನವನ್ನು ಹೇಳಿಸುತ್ತಾನೆ. ಯೇಸು ಹೇಳಿದ ವಾರ್ತಾ ಜ್ಞಾನ ಅನ್ನದೊಂದಿಗೆ ಸಹ ಅನ್ನ ಬೆರೆಸಿಕೊಂಡು ತಿನ್ನುವ ಸಾರಿನಂತಹದ್ದು. ಅನ್ನದ ರುಚಿಬೇರೆ, ಸಾರಿನ ರುಚಿಬೇರೆ ಆದರೂ ಎರಡೂ ಮನುಷ್ಯನಿಗೆ ಅಗತ್ಯವಾದ ಆಹಾರಪದಾರ್ಥಗಳೇ. ಯೇಸು ಹೇಳಿದ ಜ್ಞಾನವನ್ನು, ಕೃಷ್ಣನು ಹೇಳಿದ ಜ್ಞಾನವನ್ನು ಅರ್ಥ ಮಾಡಿಕೊಂಡರೆ, ಅನ್ನವನ್ನು ಬಡಿಸಿದ ವ್ಯಕ್ತಿ, ಸಾರನ್ನು ಬಡಿಸಿದ ವ್ಯಕ್ತಿ ಬೇರೆ ಬೇರೆಯಾದರೂ, ಅನ್ನ ಸಾರು ಬೇರೆ ಬೇರೆಯಾದರೂ ಎರಡೂ ತಿನ್ನುವ ಪದಾರ್ಥಗಳೇ ಎಂದು ತಿಳಿದುಕೊಂಡರೇ, ಎರಡು ಪದಾರ್ಥಗಳನ್ನು ಬೆರೆಸಿಕೊಂಡು ತಿಂದವನು ಹೊಂದುವ ರುಚಿಯಂತೆ, ಗೀತಾ ಜ್ಞಾನವನ್ನು, ವಾರ್ತಾ ಜ್ಞಾನವನ್ನು ಎರಡನ್ನು ಸಮನ್ವಯವಾಗಿ ಅರ್ಥ ಮಾಡಿಕೊಂಡರೆ, ಎಷ್ಟೋ ಅಭಿರುಚಿ ತೃಪ್ತಿ ಏರ್ಪಡುತ್ತದೆ. ಹಾಗಲ್ಲದೆ ಅನ್ನ ಬೆಳ್ಳಗಿದೆ, ಸಾರು ಕೆಂಪಗಿದೆ ಅದು ಬೇರೆ ಇದು ಬೇರೆ ನಾನು ಅನ್ನವೊಂದನ್ನೇ ತಿನ್ನುತ್ತೇನೆಂದು, ಅನ್ನವನ್ನು ಮಾತ್ರ ತಿಂದರೂ ಹೊಟ್ಟೆ ತುಂಬುತ್ತದೆ. ಹಾಗೆಯೇ ಸಾರನ್ನು ಮಾತ್ರವೆ ತಿನ್ನುತ್ತೇನೆಂದು ತಿಂದರೂ ಹೊಟ್ಟೆ ತುಂಬುತ್ತದೆ. ಹಾಗೆ ತಿನ್ನುವುದರಲ್ಲಿರುವ ರುಚಿ ಬೇರೆಯಾಗಿರುತ್ತದೆ. ಎರಡನ್ನು ಬೆರೆಸಿಕೊಂಡು ತಿನ್ನುವುದರಿಂದ ರುಚಿ ಬೇರೆಯಾಗಿದ್ದು ಚೆನ್ನಾಗಿರುತ್ತದೆ.

ಈಗ ಭೂಮಿಮೇಲೆ ನಾವು ಅನ್ನವನ್ನು ಮಾತ್ರ ತಿನ್ನುತ್ತೇವೆನ್ನುವಹಾಗೆ ಕೃಷ್ಣನ ವೊಂದು ಗೀತೆಯ ಜ್ಞಾನವನ್ನು ಮಾತ್ರ ಓದಿದ ಹಿಂದೂಗಳೆನ್ನುವವರು ಕೆಲವರಿದ್ದಾರೆ. ಹಾಗೆಯೇ ನಾವು ಸಾರನ್ನು ಮಾತ್ರವೆ ತಿನ್ನುತ್ತೇವೆನ್ನುವಹಾಗೆ ಯೇಸುವೊಂದರ ವಾರ್ತಾ ಜ್ಞಾನವನ್ನು ಮಾತ್ರವೆ ಓದಿದ ಕ್ರೈಸ್ತರೆನ್ನುವವರು ಎಷ್ಟೋ ಜನ ಇದ್ದಾರೆ. ಇಂತಹ ಸಮಯದಲ್ಲಿ ಅನ್ನ ಸಾರು ಎರಡರ ವಿಷಯ ತಿಳಿದ ಆದರಣಕರ್ತ ಬಂದು ಎರಡರ ವಿವರವನ್ನು ವಿವರಿಸಿ ಎರಡನ್ನು ಬೆರೆಸಿಕೊಳ್ಳಿ ಎನ್ನುವಂತೆ ಗೀತೆಯಲ್ಲಿನ ಜ್ಞಾನವನ್ನು, ವಾರ್ತೆಗಳಲ್ಲಿನ ಜ್ಞಾನವನ್ನು ವಿವರಿಸಿ ಹೇಳುತ್ತಾನೆ. ಅಲ್ಲಿಯವರೆಗು ಕೃಷ್ಣನು ಬೇರೆ, ಯೇಸು ಬೇರೆಯೆಂದು ಹಾಗೆಯೇ ಗೀತಾಜ್ಞಾನ ಬೇರೆ, ವಾರ್ತಾಜ್ಞಾನ ಬೇರೆಯೆಂದು ಹೇಳಿ ಕೊಳ್ಳುತ್ತಿರುತ್ತಾರೆ. ಭೂಮಿಮೇಲೆ ಕ್ರೈಸ್ತ ಪಾಸ್ಟರ್ ಫಾದರ್‌ಗಳೆಂಬ ಬೋಧಕರಿಗು,

ಹಿಂದೂ ಗುರುಗಳೆಂಬ ಬೋಧಕರಿಗು ವಿಭಿನ್ನವಾಗಿ ಅಲ್ಲಿಯವರೆಗು ಎರಡರಲ್ಲಿಯು ಯಾರಿಗೂ ತಿಳಿಯದ ವಿವರವನ್ನು ಆದರಣಕರ್ತ ಬೋಧಿಸಿದಾಗ, ವಿವರ ತಿಳಿದಿರುವುದಕ್ಕೆ ಕೆಲವರು ಮಾತ್ರ ಸಂತೋಷಪಡುತ್ತಾರೆ. ಬಹಳಜನ ಬೋಧಕರು ಆತನನ್ನು ವಿರೋಧಿಸುತ್ತಾರೆ. ಆತನ ಮೇಲೆ ದಾಳಿಗಳು ಸಹ ಮಾಡುತ್ತಾರೆ. ಆದರೂ ಆತನು ಯಾರಿಗೂ ಭಯಪಡದಂತೆ ತನ್ನ ಕೆಲಸವನ್ನು ತಾನು ಮಾಡುತ್ತಾನೆಂದು ಕೃಷ್ಣನು ಸಹ ಹೇಳಿದ್ದಾನೆ. ಎರಡಕ್ಕು ಸಮನ್ವಯಕರ್ತನಾದ ಆತನನ್ನು ಯೇಸು ಆದರಣಕರ್ತ ಎಂದು ಹೇಳಿದಾಗ, ಆತನು ಹುಟ್ಟುವುದು ಹಿಂದೂಮತದಲ್ಲಿ ಇರುವುದರಿಂದ ಮತ್ತು ಆತನು ಎರಡು ಮತಗಳಿಗು ಆದರ್ಶವಾಗಿ ಇರುವುದರಿಂದ, ಯೇಸು ಹೇಳಿದ ಆದರಣಕರ್ತ, ಹಿಂದೂಗಳಲ್ಲಿ "ಆದರ್ಶಕರ್ತ" ಎಂಬ ಹೆಸರಿನಿಂದ ಚಲಾವಣೆ ಆಗುತ್ತಾನೆಂದು ಕೃಷ್ಣನು ಬೇಟೆಗಾರನಿಗೆ ಹೇಳಿ ಹೋಗಿದ್ದಾನೆ. ಕೃಷ್ಣನು ಹೇಳಿದ ಆದರ್ಶಕರ್ತ, ಯೇಸು ಹೇಳಿದ ಆದರಣಕರ್ತ ಇಬ್ಬರೂ ಒಬ್ಬರೇಯೆಂದು ತಿಳಿದುಹೋಗಿದೆ. ಆದರಣ ಕರ್ತನಾದ ಆದರ್ಶಕರ್ತ ಎಂಬ ಹೆಸರು ಯಾರಿಗಿದೆಯೊ ಎಂದು ಹುಡಿಕಿದರೆ ಆ ಹೆಸರನ್ನನುಸರಿಸಿ ಸುಲಭವಾಗಿ ಮೂರನೆವ್ಯಕ್ತಿಯನ್ನು ಗುರುತಿಸುತ್ತೇವೆ. ಆ ಹೆಸರಿರುವವನು ಬಂದುಹೋಗಿದ್ದಾನಾ! ಇಲ್ಲವೆ ಬಂದಿದ್ದಾನಾ! ಇಲ್ಲವೆ ಬರುವಂತಹ ಕಾಲದಲ್ಲಿ ಬರುತ್ತಾನಾ! ಎಂಬ ವಿಷಯ ಮಾತ್ರ ಅರ್ಥವಾಗದ ವಿಷಯ.

ಆದರ್ಶಕರ್ತ ಎಂಬ ಹೆಸರಿರುವವನು ಆದರಣಕರ್ತನಾಗಿ ಇತ್ತ ಯೇಸು, ಅತ್ತ ಕೃಷ್ಣನ ಜ್ಞಾನವನ್ನು ವಿವರಿಸಿ ಹೇಳುವುದೇ ಅಲ್ಲದೆ, ಇನ್ನೂ ಅರ್ಥವಾಗದೆ ಉಳಿದಿರುವ ಧರ್ಮಗಳನ್ನು ಎಂದರೆ ಇನ್ನೂ ತಿಳಿಯದಿರುವ ಧರ್ಮಗಳನ್ನು ಹೊಸ ವಿಧಾನದಲ್ಲಿ ತಿಳಿಸಿ ಪೂರ್ಣಗೊಳಿಸುತ್ತಾನೆಂದು ಕೃಷ್ಣನು ಹೇಳಿಹೋಗಿದ್ದಾನೆ ಅಲ್ಲವೆ!. ಆತನು ಪೂರ್ಣಮಾಡುವ ಧರ್ಮಗಳನ್ನು ಹೇಗೆ ಹೋಲಿಸಬಹುದೊ ವಿವರಿಸಿಕೊಳ್ಳೋಣ. ಮನುಷ್ಯನಿಗೆ ಸಂತೃಪ್ತಿಕೊಡುವ ಪೂರ್ತಿ ಭೋಜನ ಮೂರು ಭಾಗಗಳಾಗಿ ಇರುತ್ತದೆಂದು, ಆ ಮೂರು

ಭಾಗಗಳನ್ನು ಅನ್ನ, ಸಾರು, ಮಜ್ಜಿಗೆ (ಮೊಸರು) ಎಂದು ಹೇಳಿಕೊಂಡಿದ್ದೇವೆ. ಅನ್ನವನ್ನು ರುಚಿಕರವಾದ ಸಾರಿನೊಂದಿಗೆ ತಿಂದರೂ, ಕೊನೆಯಲ್ಲಿ ಮಜ್ಜಿಗೆಯಿಂದ ತಿಂದರೇನೆ ತೃಪ್ತಿಯಾಗಿರುತ್ತದೆ, ಪೂರ್ತಿ ಭೋಜನ ಆದಂತೆ ಇರುತ್ತದೆ. ಹಾಗೆಯೇ ಬರುವಂತಹ ಆದರ್ಶಕರ್ತ, ಕೃಷ್ಣನು ಗೀತೆಯನ್ನು ಹೇಳಿದಾಗ ಅದರಲ್ಲಿ ಸಹ ತಿಳಿಯದಿರುವುದು ಏನಾದರೆ ಇದೆಯೋ, ಹಾಗೆಯೇ ಯೇಸು ತನ್ನ ವಾರ್ತೆಯನ್ನು ಹೇಳಿದಾಗ ಅಲ್ಲಿಯೂ ಸಹ ತಿಳಿಯದಿರುವುದು ಏನಾದರೆ ಇದೆಯೋ, ಎರಡುಕಡೆ ತಿಳಿಯದೆ ಉಳಿದಿರುವುದನ್ನು ಪೂರ್ತಿಯಾಗಿ ತಿಳಿಸುತ್ತಾನೆ. ದೇವರ ಧರ್ಮಗಳ ವಿಷಯದಲ್ಲಿ ಯಾರಹತ್ತಿರಾಗಲಿ ಪ್ರಶ್ನೆ ಎನ್ನುವುದಾಗಲಿ, ಸಂಶಯ ಎನ್ನುವುದಾಗಲಿ ಇಲ್ಲದಹಾಗೆ ಮಾಡುವನು. ಇದನ್ನು ಅನುಸರಿಸಿ ಆದರ್ಶಕರ್ತ ಎಂಬ ಹೆಸರಿನಿಂದ ಬರುವವನು ನಾಸ್ತಿಕರ ಹತ್ತಿರವಾಗಲಿ, ಹೇತುವಾದಿಗಳ ಹತ್ತಿರವಾಗಲಿ ದೇವರನ್ನು ಕುರಿತು ಕೇಳುವ ಪ್ರಶ್ನೆಯೇ ಇಲ್ಲದಂತೆ ಮಾಡುತ್ತಾನೆ. ಆದ್ದರಿಂದ ಆದರ್ಶಕರ್ತ ಇತ್ತ ನಾಸ್ತಿಕರಿಗೂ, ಅತ್ತ ಆಸ್ತಿಕರಿಗೂ ತಿಳಿಯದ ಜ್ಞಾನ ವಿಧಾನವನ್ನು ತಿಳಿಸುತ್ತಾನೆಂದು ಅರ್ಥ ವಾಗುತ್ತಿದೆ. ದ್ವಾಪರಯುಗದಲ್ಲಿ ಕೃಷ್ಣನು ಮರಣಿಸುತ್ತಾ ಹೇಳಿದ ಆದರ್ಶಕರ್ತ, ಕಲಿಯುಗದಲ್ಲಿ ಯೇಸು ಬೋಧಿಸುತ್ತಾ ಹೇಳಿದ ಆದರಣಕರ್ತ, ಎಷ್ಟೋ ದೊಡ್ಡ ಜ್ಞಾನವನ್ನು ಹೊಂದಿ ಕ್ರೈಸ್ತರಿಗೂ, ಹಿಂದೂಗಳಿಗೂ ನುಂಗಲಾರದಂತ ಹವನಾಗಿರುತ್ತಾನೆ. ಆದರಣಕರ್ತ, ಆದರ್ಶಕರ್ತ ಆದವನು ಹೇಳಿದ ಬೋಧನೆಯನ್ನು ಗ್ರಹಿಸಿದ ಹಿಂದೂಗಳು, ಕ್ರೈಸ್ತರು, ಆತನಲ್ಲಿಯೇ ಕೃಷ್ಣನನ್ನು, ಆತನಲ್ಲಿಯೇ ಯೇಸುನನ್ನು ನೋಡಿಕೊಳ್ಳುತ್ತಾರೆ. ನಾನು ಈಗ ಹೇಳಿದ ವಿಷಯಗಳು ಹಿಂದೂ ಮತ ಪ್ರಚಾರಕ್ಕೋ, ಇಲ್ಲವೆ ಕ್ರೈಸ್ತ ಮತಪ್ರಚಾರಕ್ಕೊಸ್ಕರವೋ ಅಲ್ಲ. ಎರಡು ಮತಗಳಿಗೂ ಅತೀತವಾದ ದೇವರನ್ನು ಕುರಿತು ತಿಳಿಸುವ ವಿಧಾನವೆಂದು ತಿಳಿಯಬೇಕು. ಅಷ್ಟೇ ಅಲ್ಲದೆ ಕೃಷ್ಣನು ಕೊನೆಯ ಕಾಲದಲ್ಲಿ ಕೊನೆಯದಾಗಿ ಹೇಳಿದ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತಿನಲ್ಲಿ ಆದರ್ಶಕರ್ತ ಹೆಸರಿರುವುದು ವಿಶೇಷ. ಈ ದಿನ ಭೂಮಿ ಮೇಲಿರುವ ಜ್ಞಾನವನ್ನು ಕುರಿತು, ಅಜ್ಞಾನವನ್ನು ಕುರಿತು, ಹುಟ್ಟಿಬಂದ ಮತಗಳನ್ನು ಕುರಿತು ಕೃಷ್ಣನು ಆ ದಿನವೇ

ಹೇಳಿದ್ದಾನೆ. ಇದೆಲ್ಲವೂ ಕೃಷ್ಣನು ಕೊನೆಯ ದಿನ ಹೇಳಿದ ಭವಿಷ್ಯತ್ತು ವಿವರವೆಂದು ತಿಳಿಯಬೇಕು.

ಈಗೊಂದು ಪ್ರಶ್ನೆ ಬಾರದೆ ಇರುವುದಿಲ್ಲ. ಅದೇನೆಂದರೆ! ಕೃಷ್ಣನು ಯುದ್ಧರಂಗದಲ್ಲಿ ಬೋಧನೆ ಹೇಳಿದಾಗ ಕೇಳಿಸಿಕೊಂಡ ಅರ್ಜುನನು ನಂತರ ವ್ಯಾಸನಿಗೆ ಹೇಳಿದ್ದಾನೆಂದು, ವ್ಯಾಸನ ಮೂಲಕ ಎಲ್ಲರಿಗೂ ತಿಳಿದಿದೆಯೆಂದು ಹೇಳಿದ್ದೀರ. ಅದನ್ನು ಒಂದು ವಿಧವಾಗಿ ಸತ್ಯವೇಯೆಂದು ಒಪ್ಪಿಕೊಳ್ಳಬಹುದು. ಆದರೆ ಕೃಷ್ಣನು ಮರಣಿಸುವ ಕೊನೆಯ ಸಮಯದಲ್ಲಿ ಕಲಿಯುಗ ಆಧ್ಯಾತ್ಮಿಕವನ್ನು ಕುರಿತು ಹೇಳಿದ್ದಾನೆಂದು, ಅದನ್ನು ಬೇಟೆಗಾರನು ಕೇಳಿದ್ದಾನೆಂದು ಹೇಳಿದ್ದೀರ. ಅಲ್ಲಿ ಯಾರೂ ಇಲ್ಲದ ಆ ಸಮಯದಲ್ಲಿ ಕೃಷ್ಣನು ಹೇಳಿದ ಸಮಾಚಾರವನ್ನು ಕೇಳಿದ ಬೇಟೆಗಾರನು ಆ ವಿಷಯವನ್ನು ನಂತರ ಯಾರಿಗೂ ಹೇಳಿದಹಾಗೆ ಸುಳಿವು ಇಲ್ಲ. ಬೇಟೆಗಾರನು ಹೇಳಿದಂತೆ ಎಲ್ಲಿಯೂ ಇಲ್ಲದಿರುವಾಗ ಅಲ್ಲಿ ನಡೆದ ವಿಷಯ ನಿಮಗೆ ಹೇಗೆ ತಿಳಿದಿದೆ? ನೀವು ಹೇಗೆ ಆ ವಿಷಯಗಳೆಲ್ಲವನ್ನು ಹೇಳುತ್ತಿದ್ದೀರೆಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಅರ್ಜುನನು ಗೀತೆಯನ್ನು ವ್ಯಾಸನಿಗೆ ಹೇಳಿದಂತೆ ಭಾರತದಲ್ಲಾಗಲಿ, ಭಾಗವತದಲ್ಲಾಗಲಿ ಇಲ್ಲ. ಅಲ್ಲಿ ವ್ಯಾಸನು ತಿಳುವಳಿಕೆಯಿಂದ ಪ್ರವರ್ತಿಸಿ, ಅರ್ಜುನನು ಹೇಳಿದಹಾಗೆ ತಿಳಿಯದಂತೆಮಾಡಿ, ಸಂಜಯನು ಧೃತರಾಷ್ಟ್ರನಿಗೆ ಹೇಳಿದಂತೆ ವರ್ಣಿಸಿದ್ದಾನೆ. ಹೇಗಾದರೇನು! ಕೊನೆಗೆ ಕೃಷ್ಣನು ಅರ್ಜುನನಿಗೆ ಹೇಳಿದ ವಿಷಯ ಹೊರಗೆ ಬಂದಿದೆ. ಆದರೆ ಇಲ್ಲಿ ಭಾಗವತದಲ್ಲಿ ಬಾಣದಿಂದ ಹೊಡೆದ ಬೇಟೆಗಾರನ ಪಾತ್ರವನ್ನು ಸಾಯಿಸಿ ಬೇಟೆಗಾರನನ್ನು ಪೂರ್ತಿಯಾಗಿ ಇಲ್ಲದಂತೆ ಮಾಡಿದ್ದಾರೆ. ಆದ್ದರಿಂದ ಕೃಷ್ಣನು ಹೇಳಿದ ವಿಷಯ ಪ್ರಸ್ತಾವನೆಗೇ ಬರಲಿಲ್ಲ, ನಂತರ ಯಾರಿಗೂ ತಿಳಿಯದಂತೆ ಹೋಗಿದೆ. ಆ ಬೇಟೆಗಾರನು ತನಗೆ ಕಲಿಯುಗ ಆಧ್ಯಾತ್ಮಿಕ ಭವಿಷ್ಯತ್ತು ತಿಳಿದರೂ, ಆ ವಿಷಯವನ್ನು ಯಾರಿಗೂ ಹೇಳಬೇಕೆಂದುಕೊಳ್ಳಲಿಲ್ಲ. ತನಗೆ ಪರಿಚಯ ಇರುವವರೆಲ್ಲಾ ನಿತ್ಯ ಬೇಟೆಗೆ ಹೋಗಿ ಬದುಕುವವರೆ, ಆದ್ದರಿಂದ ಅವರಿಗೆ ಈ ವಿಷಯದ ಅವಶ್ಯಕತೆ ಇಲ್ಲವೆಂದುಕೊಂಡಿದ್ದಾನೆ.

ಯಾರಿಗಾದರೂ ಹೇಳಬೇಕೆಂದುಕೊಂಡರೂ ಇವನಿಗೆ ಹೇಳುವುದಕ್ಕೆ ಆಗಲಿಲ್ಲ. ಈ ವಿಧವಾಗಿ ಆ ವಿಷಯ ಅವನೊಂದಿಗೆ ಇಲ್ಲದಹಾಗೆ ಹೋಗಿದೆ. ಹಾಗೆ ಅವನು ಆ ಜನ್ಮದಲ್ಲಿ ಮರಣಿಸಿ ನಂತರ ಜನ್ಮದಲ್ಲಿ ಹುಟ್ಟುತ್ತಾಬಂದು ಆಗಿನಿಂದ ಇಲ್ಲಿಯವರೆಗು ಎಷ್ಟೋ ಜನ್ಮಗಳು ಎತ್ತಿದ್ದಾನೆ. ಆ ವಿಧವಾಗಿ ಆ ಜೀವಿಯು ಜನ್ಮಿಸುತ್ತಾ, ಮರಣಿಸುತ್ತಾ ಏಷ್ಟೋ ಜನ್ಮಗಳನ್ನು ಧರಿಸಿದರೂ ಆತನ ಹಿಂದೆ ಆತ್ಮ ಬರುತ್ತಲೇ ಇರುತ್ತದೆ. ಆ ಜೀವಿಯು ಎಷ್ಟು ಜನ್ಮಗಳು ಬದಲಾಯಿಸಿದರೂ ಅವನೊಂದಿಗೆ ಶಾಶ್ವತವಾಗಿರುವ ಆತ್ಮ ಸಹ ಅವನಿಂದಲೇ ಇರುತ್ತಾ ಎಲ್ಲಾ ಜನ್ಮಗಳಿಗೂ ಸಾಕ್ಷಿಯಾಗಿರುತ್ತದೆ. ಹಿಂದಿನ ಜನ್ಮ ವಿಷಯಗಳು ಸಹ ಜೀವಿಗೆ ತಿಳಿದಿಲ್ಲ. ಆದರೆ ಆದಿಯಿಂದ ಎಲ್ಲಾ ಜನ್ಮಗಳಿಗೂ ಸಾಕ್ಷಿಯಾಗಿರುವ ಆತ್ಮಕ್ಕೆ ಎಲ್ಲಾ ಜನ್ಮಗಳ ವಿಷಯಗಳೂ ತಿಳಿಯುತ್ತವೆ. ದ್ವಾಪರಯುಗ ಅಂತ್ಯದಲ್ಲಿ ಕೊನೆಯದಾಗಿ ಕೃಷ್ಣನು ಬೇಟೆಗಾರನಿಗೆ ಹೇಳಿದ ವಿಷಯವೆಲ್ಲಾ ಆತನ ಆತ್ಮಗೆ ತಿಳಿಯುತ್ತದೆ. ಆತನು ಈಗ ಪ್ರಸ್ತುತ ಜನ್ಮದಲ್ಲಿ ಒಂದು ರೋಗದಿಂದ ಬಾಧೆಪಡುತ್ತಾ ನನ್ನ ಹತ್ತಿರಕ್ಕೆ ಬರುವುದು ನಡೆದಿದೆ. ಆಗ ನಾನು ಆತನಿಗೆ ಕರ್ಮವನ್ನು ಉದಾಹರಣೆ ಕೊಡುವುದಕ್ಕೆ ದೈವಜ್ಞಾನವನ್ನು ಹೇಳುವ ಸಮಯದಲ್ಲಿ, ಆ ಜೀವಿಯು ನಿದ್ರಾವಸ್ತೆಯೊಳಗೆ ಹೋಗಿ ಒಳಗಿರುವ ಆತ್ಮವೇ ಕೇಳುವುದಕ್ಕೆ ಆರಂಭಿಸಿದೆ. ನಾನು ಕೃಷ್ಣನನ್ನು ಕುರಿತು ಆತನು ಹೇಳಿದ ಜ್ಞಾನವನ್ನು ಕುರಿತು ಹೇಳುವ ಸಮಯದಲ್ಲಿ, ಆತನಲ್ಲಿನ ಆತ್ಮ ಕೃಷ್ಣನ ಮರಣ ಸಮಯದಲ್ಲಿ ನಡೆದ ವೃತ್ತಾಂತವೆಲ್ಲವನ್ನು ವಿವರವಾಗಿ ನನಗೆ ಹೇಳಿದೆ. ಆದ್ದರಿಂದ ಅದನ್ನೇ ನಾನು ನಿಮಗೆ ಹೇಳಿದ್ದೇನೆ.

ಇದೇನೊ ಕಾಗೆ ಗುಬ್ಬಚ್ಚಿ ಕಥೆಯಂತದ್ದು ಎಂದುಕೊಳ್ಳಬೇಡಿ. ಮನುಷ್ಯನಿಗೆ ಜನ್ಮಗಳಿರುವುದು ನಿಜವೆ, ಪುನರ್ಜನ್ಮದಲ್ಲಿ ಜ್ಞಾಪಕ ಅಪರೂಪವಾಗಿ ಯಾರಿಗಾದರೂ ಬರಬಹುದು. ಹಾಗೆ ಬಂದ ಸಂಘಟಣೆಗಳು ಸಹ ಎಷ್ಟೋ ಇವೆ. ನಡೆದುಹೋದ ಜನ್ಮಗಳಲ್ಲಿನ ವಿಷಯಗಳು ಜ್ಞಾಪಕ ಬರುವುದಕ್ಕೆ ಒಂದೇ ಒಂದು ಆತ್ಮವೇ ಕಾರಣ. ಜೀವಿಗಾಗಲಿ, ಮನಸ್ಸಿಗಾಗಲಿ, ಬುದ್ಧಿಗಾಗಲಿ ಗತಜನ್ಮ

ಜ್ಞಾಪಕಗಳು ಇರುವುದಿಲ್ಲ. ವಿಷಯಗಳನ್ನು ಜ್ಞಾಪಕ ಇಟ್ಟುಕೊಳ್ಳುವ ಸಾಮರ್ಥ್ಯ ಶರೀರದಲ್ಲಿನ ಮನಸ್ಸಿಗೆ ಮಾತ್ರವಿರುತ್ತದೆ. ಮನಸ್ಸು ಮರಣಿಸಿದ ಜನ್ಮದಲ್ಲಿಯೇ ಹೋಗುತ್ತದೆ. ನಂತರ ಜನ್ಮದಲ್ಲಿ ಹೊಸ ಮನಸ್ಸು ಬರುತ್ತದೆ. ಆದ್ದರಿಂದ ಪ್ರಸ್ತುತ ಜನ್ಮದಲ್ಲಿ ಗತಜನ್ಮ ಜ್ಞಾಪಕಗಳು ಪ್ರಸ್ತುತವಿರುವ ಮನಸ್ಸಿಗೆ ತಿಳಿಯವು. ಮನಸ್ಸು ನಂತರ ಜ್ಞಾಪಕವನ್ನು ಉಂಟುಮಾಡುವುದು ಆತ್ಮ. ಒಬ್ಬ ಮನುಷ್ಯ ನಿದ್ರೆ  ಹೋಗುವ ಸಮಯದಲ್ಲಿ ಮನಸ್ಸು ಹೊರಗೆ ಅವಯವಗಳ ಸಂಬಂಧ ಕಳೆದುಕೊಂಡು, ಬ್ರಹ್ಮನಾಡಿಯಲ್ಲಿ ಅಣಿಗಿರುತ್ತಾನೆ. ಆಗ ಆ ಶರೀರದಲ್ಲಿನ ಆತ್ಮ ಮನಸ್ಸಿನಂತೆ ಕೆಲಸಮಾಡಿ ಯಾರಾದರೂ ಕರೆದರೆ, ಆ ಕರೆಯನ್ನು ಬುದ್ಧಿಗೆ ಜೀವಿಗೆ ಸೇರಿಸಿ ನಿದ್ರೆಯಿಂದ ಮೇಲೇಳುವಂತೆ ಮಾಡುತ್ತಿದೆ. ಅಷ್ಟೇ ಅಲ್ಲದೆ ಆತ್ಮ ಶರೀರದಲ್ಲಿ ರಾತ್ರಿಹಗಲು ಎಲ್ಲಾ ವಿಷಯಗಳಿಗು ಸಾಕ್ಷಿಯಾಗಿದೆ. ಒಬ್ಬ ಮನುಷ್ಯ ಎಷ್ಟು ಜನ್ಮಗಳು ಎತ್ತಿದರೂ ಅವನನ್ನು ಬಿಡದ ಹಾಗೆ ಇರುವುದು ಆತ್ಮ ಒಂದೆಯೇ. ಆ ದಿನ ಕೃಷ್ಣನು ಮರಣಿಸಿದಾಗ ಬೇಟೆಗಾರನ ಶರೀರದಲ್ಲಿ ಜೀವಿಯೊಂದಿಗೆ ಇರುವ ಆತ್ಮ, ಕೃಷ್ಣನ ಮರಣ ಸಮಯದಲ್ಲಿ ಏನು ನಡೆದಿರುವುದು, ಏನು ಸಂಭಾಷಣೆ ನಡೆದಿರುವುದು ಎಲ್ಲವನ್ನು ನೋಡಿದೆ. ಇದು ಸರ್ವ ಮಾನವರಲ್ಲಿ ನಡೆಯುವ ಪ್ರಕ್ರಿಯ. ಆದರೆ ಯಾರಿಗೂ ಶರೀರದೊಳಗೆ ನಡೆಯುವ ತತಂಗ ತಿಳಿಯದು, ಬೇಟೆಗಾರನ ಶರೀರದಲ್ಲಿನ ಆತ್ಮ ನನಗೆ ತಿಳಿಸಿರುವುದು ಕೆಲವರಿಗೆ ವಿಚಿತ್ರವಾಗಿ ಕಾಣಿಸಿದರೂ, ಇದು ನಿಜವಾಗಲೂ ಕೆಲವು ಸಂದರ್ಭಗಳಲ್ಲಿ ನಡೆಯುವುದೇ. ಕೃಷ್ಣನ ಮರಣಕ್ಕೆ ಆತ್ಮ ಸಾಕ್ಷಿ ಆಗಿರುವುದರಿಂದ ಆಗಿನ ವಿಷಯ ಪ್ರಸ್ತುತ ಜನ್ಮದಿಂದ, ಪ್ರಸ್ತುತ ವ್ಯಕ್ತಿಯಿಂದ ಹೇಳುವುದು ನಡೆದಿದೆ. ಇಲ್ಲಿ ಇನ್ನೊಂದು ವಿಶೇಷವೂ ಸಹ ಇದೆ. ಅದೇನೆಂದರೆ! ದ್ವಾಪರಯುಗದಲ್ಲಿ ಕೃಷ್ಣನ ಮರಣ ಸಮಯದಲ್ಲಿರುವ ಆಗಿನ ಬೇಟೆಗಾರನು ಆಗಿನಿಂದ ಎಷ್ಟೋ ಜನ್ಮಗಳು ಎತ್ತುತ್ತಾ ಬಂದು, ಕೊನೆಗೆ ಪ್ರಸ್ತುತ ಜನ್ಮದಲ್ಲಿ ನನ್ನ ಮುಂದಕ್ಕೆ ಬರುವುದು ನಡೆದಿದೆ. ಹಾಗೆ ನನ್ನ ಮುಂದಕ್ಕೆ ಬಂದಿರುವ ಪ್ರಸ್ತುತ ವ್ಯಕ್ತಿ ಕ್ರೈಸ್ತ ಮತಕ್ಕೆ ಸೇರಿದವನು. ಆಗಿನ ಹಿಂದೂಮತದಲ್ಲಿನ ಬೇಟೆಗಾರನು ಈಗಿನ ಕ್ರೈಸ್ತ ಮತದಲ್ಲಿನ ವ್ಯಕ್ತಿ ಎಂದು ತಿಳಿಯುತ್ತಿದೆ.

ಈಗಿನ ಕ್ರೈಸ್ತನು ಆಂದಿನ ವಿಷಯವನ್ನು ಹೇಳುವುದೇನು! ಎಂದು ಆಶ್ಚರ್ಯ ಪಡಬೇಕಾದ ಅವಶ್ಯಕತೆ ಇಲ್ಲ. ಮನುಷ್ಯ ಬದುಕಿರುವವರೆಗೇ ಮತ, ಮರಣಿಸಿದ ನಂತರ ಯಾರು ಯಾವ ಮತದಲ್ಲಾದರೂ ಕರ್ಮಪ್ರಕಾರ ಹುಟ್ಟಬಹುದು. ಗತ ಜನ್ಮದಲ್ಲಿನ ಕ್ರೈಸ್ತರು ಈ ಜನ್ಮದಲ್ಲಿ ಹಿಂದೂಗಳಾಗಿ ಹುಟ್ಟಬಹುದು. ಈ ಜನ್ಮದಲ್ಲಿನ ಹಿಂದೂಗಳು ಬರುವಂತಹ ಜನ್ಮದಲ್ಲಿ ಕ್ರೈಸ್ತರಾಗಿ ಹುಟ್ಟಬಹುದು. ಒಬ್ಬ ಮನುಷ್ಯ ಯಾವ ಮತದಲ್ಲಿ ಜೀವನ ಸಾಗಿಸಬೇಕೊ ಅವನ ಕರ್ಮವೇ ನಿರ್ಣಯಿಸುತ್ತದೆ. ಅದರ ಪ್ರಕಾರವೇ ಕೆಲವರು ಹಿಂದೂಗಳಾಗಿ, ಕೆಲವರು ಕ್ರೈಸ್ತರಾಗಿ ಹುಟ್ಟುತ್ತಿದ್ದಾರೆ. **ಯಾರಿಗಾದರೂ ಹುಟ್ಟಿನಿಂದ ಬಂದಿರುವ ಮತ ದೇವರ ಸಮ್ಮತಿಯಿಂದ ಬಂದಿರುವುದಾಗಿ ಲೆಕ್ಕಿಸಬೇಕು**. ಯಾರಾದರೂ ಒಬ್ಬ ಹಿಂದೂ, ಕ್ರೈಸ್ತ ಮತದೊಳಗೆ ಬದಲಾಗಬೇಕೆಂದು ತಿಳಿದರೂ, ಒಂದುವೇಳೆ ಕ್ರೈಸ್ತನಾಗಿ ಬದಲಾದರೂ, ಅದು ದೇವರಿಗೆ ವಿರುದ್ಧವಾದ ಕಾರ್ಯವಾಗುತ್ತದೆ. ದೇವರ ಪರಿಪಾಲನೆಯನ್ನು ಧಿಕ್ಕರಿಸಿದಂತಾಗುತ್ತದೆ. ಹಾಗೇ ಒಬ್ಬ ಕ್ರೈಸ್ತನು ಹಿಂದೂವಾಗಿ ಬದಲಾಗಬೇಕೆಂದರೂ, ಒಂದುವೇಳೆ ಬದಲಾದರೂ ಆತನು ಸಹ ದೇವರಿಗೆ ವಿರೋಧಿ ಆಗುತ್ತಾನೆ. ದೇವರ ಪಾಲಕರು ಆತನ ಮೇಲೆ ಕೋಪ ಹೊಂದಿರುತ್ತಾರೆ. ಆದ್ದರಿಂದ **ಮತಮಾರ್ಪಾಟು ಮಹಾಪಾಪವೆಂದು, ದೈವ ನಿರ್ಣಯಕ್ಕೆ ವಿರುದ್ಧವಾಗಿ ಮಾಡಿದಂತಾಗುತ್ತದೆಂದು ತಿಳಿಸುತ್ತಿದ್ದೇವೆ.** ಈಗಿನ ಕಾಲದಲ್ಲಿ ಮತ ಮೌಢ್ಯವು ಎಲ್ಲಾ ದೇಶಗಳಲ್ಲಿ ಹರಡಿಹೋಗಿದೆ. ಆದ್ದರಿಂದಲೇ ಯುದ್ಧಗಳು ನಡೆಯುತ್ತಿವೆ. ಹಿಂಸೆ ಉದ್ರೇಕಗೊಳ್ಳುತ್ತಿದೆ. ಒಬ್ಬರನ್ನೊಬ್ಬರು ಹೊಡೆದುಕೊಂಡು ಸಾಯುತ್ತಿದ್ದಾರೆ. ಕೊನೆಗೆ ನಮ್ಮಂತವರನ್ನು ಸಹ ಅಗೌರವವಾಗಿ ಮಾತನಾಡುತ್ತಿದ್ದಾರೆ. ಇಂತಹ ಕಾಲ ಬರುತ್ತದೆಂದು ದ್ವಾಪರಯುಗದಲ್ಲಿಯೇ ಕೃಷ್ಣನು ಹೇಳಿದ್ದಾನೆ, ಹಾಗೆಯೇ ಬಂದಿದೆ. ನನ್ನದು ಕ್ರೈಸ್ತ ನಿನ್ನದು ಹಿಂದೂತ್ವ ಎಂಬ ಅಜ್ಞಾನ ರೋಗ ಹೋಗುವುದಕ್ಕೆ, ಆ ದಿನವೇ ಔಷಧಿಯನ್ನು ಸಹ ತಯಾರುಮಾಡಿ ಕೊಟ್ಟುಹೋದಂತೆ ತಿಳಿಯುತ್ತಿದೆ. ಆ ದಿನ ಕೃಷ್ಣನು ಬರುವಂತಹ ಮತರೋಗವನ್ನು ಕುರಿತು ಹೇಳಿದ್ದಾನೆ. ಆತನು ಹೇಳಿದಹಾಗೆ ಆ ರೋಗ ಬಂದಿದೆ. ಆದರೆ ರೋಗವನ್ನು ಕುರಿತು

ಹೇಳಿದಾಗಲೇ, ರೋಗ ವ್ಯಾಪ್ತಿಯಾಗದಂತೆ, ರೋಗ ಪೂರ್ತಿ ನಿವಾರಣೆ ಆಗುವುದಕ್ಕೆ ಔಷಧಿ ಜ್ಞಾನವನ್ನು ಸಹ ತಿಳಿಸಿದ್ದಾನೆ. ಮತವೆಂಬ ರೋಗಕ್ಕೆ, ಜ್ಞಾನವೆಂಬ ಔಷಧಿ ಏನೋ ಆ ದಿನ ಆತನು ಸೂಚಿಸಿದರೂ, ಈ ದಿನ ಅದನ್ನು ತಿಳಿಯಲಾರದ ಸ್ಥಿತಿಯಲ್ಲಿ ಇದ್ದೇವೆ. ಆದ್ದರಿಂದ ಮತ ರೋಗ ಪೂರ್ತಿ ವೃದ್ಧಿಯಾಗಿ ಹೋಗುತ್ತಿದೆ. ಹಾಗೆ ಅಲ್ಲದೆ ಈಗ ನಾವು ಕೃಷ್ಣನು ಸೂಚಿಸಿದ ವಿಧಾನವನ್ನು ತಿಳಿದುಕೊಳ್ಳೋಣ.

ದೇವರು ಮತವನ್ನು ಸೃಷ್ಟಿಸಲಿಲ್ಲ. ದೇವರು ತನ್ನ ಜ್ಞಾನವನ್ನು ಧರ್ಮಗಳ ರೂಪದಲ್ಲಿ ತಿಳಿಸಿದ್ದಾನೆ. ದೇವರು ತನ್ನ ಶಕ್ತಿಯನ್ನು ತನ್ನ ವ್ಯಕ್ತಿಯನ್ನಾಗಿ ರೂಪಿಸಿ ಭೂಮಿಮೇಲೆ ಜ್ಞಾನವನ್ನು ಬೋಧಿಸುವ ಹಾಗೆ ಮಾಡಿದ್ದಾನೆ. ಹಾಗೆ ಬಂದಿರುವ ವ್ಯಕ್ತಿಯನ್ನು ಭಗವಂತನೆಂದು ಹಿಂದೂಗಳು, ಪ್ರವಕ್ತ ಎಂದು ಕ್ರೈಸ್ತರು ಕರೆಯುತ್ತಿದ್ದಾರೆ. ಯಾರು ಏನೆಂದರೂ ಬಂದಿರುವ ವ್ಯಕ್ತಿ ದೇವರ ಶಕ್ತಿಯೇ ಎಂದು ಜ್ಞಾಪಕವಿಟ್ಟುಕೊಳ್ಳಬೇಕು. ಅಪಾರವಾದ ದೈವಶಕ್ತಿಯಲ್ಲಿ ಸ್ವಲ್ಪ ಭಾಗ ವ್ಯಕ್ತಿಯಾಗಿ ಬಂದಾಗ, ಆ ವ್ಯಕ್ತಿಗೂ ಸಹ ಪ್ರಪಂಚದಲ್ಲಿ ಗುರುತಿಗೋಸ್ಕರ ಹೆಸರಿರುತ್ತದೆ. ಒಂದು ಕಾಲದಲ್ಲಿ ಒಂದು ಊರಿನಲ್ಲಿರುವ ಪ್ರವಕ್ತರಿಗಾಗಲಿ, ಭಗವಂತನಿಗಾಗಲಿ ಒಂದು ಹೆಸರಿರುತ್ತದೆ. ದ್ವಾಪರಯುಗದಲ್ಲಿ ದೈವ ಭಾಗಗಳಲ್ಲಿ ಒಂದು ಭಾಗವಾಗಿ ಬಂದಿರುವ ವ್ಯಕಿಯ ಹೆಸರು ಕೃಷ್ಣ. ಕೃಷ್ಣನು ದ್ವಾಪರಯುಗದಲ್ಲಿ ಉತ್ತರ ಭಾರತದೇಶದಲ್ಲಿ ಮಧುರೆಯಲ್ಲಿ ಹುಟ್ಟಿದ್ದಾನೆ. ಭಗವಂತನಾದ ಕೃಷ್ಣನು ದೇವರ ಧರ್ಮಗಳನ್ನು ತಿಳಿಸಿಹೋಗಿದ್ದಾನೆ. ಆತನು ಹೋದ ನಂತರ ಸುಮಾರು ಮೂರು ಸಾವಿರ (3000) ವರ್ಷಗಳಿಗೆ ದೈವಶಕ್ತಿ ಕಲಿಯುಗದಲ್ಲಿ ಇಸ್ರಾಈಲ್ ದೇಶದಲ್ಲಿ ಜೆರೂಸಲೇಮು ನಗರದಲ್ಲಿ ಒಬ್ಬ ವ್ಯಕ್ತಿಯಾಗಿ ಹುಟ್ಟಿದೆ. ಆ ವ್ಯಕ್ತಿ ಯೇಸು ಎಂಬ ಹೆಸರಿನಿಂದ ಕರೆಯಲ್ಪಟ್ಟಿದ್ದಾನೆ. ದ್ವಾಪರಯುಗದಲ್ಲಿ ಹುಟ್ಟಿದ ದೈವಶಕ್ತಿ ಹೆಸರು ಕೃಷ್ಣ ಎಂಬ ಎರಡು ಅಕ್ಷರಗಳು. ಕಲಿಯುಗದಲ್ಲಿ ಹುಟ್ಟಿದ ದೈವಶಕ್ತಿ ಹೆಸರು ಯೇಸು ಎಂಬ ಎರಡಕ್ಷರಗಳು. ದೈವಶಕ್ತಿ ಭೂಮಿಮೇಲಕ್ಕೆ ಬರುವುದೇ ಅಪರೂಪ. ಕೆಲವು ಲಕ್ಷಗಳ

ವರ್ಷಗಳಿಗೊಂದುಬಾರಿ ಬರುವ ದೈವಶಕ್ತಿ, ಮೂರುಸಾವಿರ ವರ್ಷಗಳಿಗೆ ಎರಡನೆಬಾರಿ ಬರುವುದು ಆಶ್ಚರ್ಯಪಡಬೇಕಾದ ವಿಷಯ. ಭಗವದ್ಗೀತೆಯಲ್ಲಿ ಸಹ ಧರ್ಮಗಳಿಗೆ ಹಾನಿ ಏರ್ಪಟ್ಟಾಗ, ಅಧರ್ಮಗಳು ಹೆಚ್ಚಾದಾಗ, ಅಧರ್ಮಗಳನ್ನು ಅಣಗಿಸಿ ಪುನಃ ಧರ್ಮಗಳನ್ನು ತಿಳಿಸುವುದಕ್ಕೆ ಯುಗಯುಗದಲ್ಲಿ ಬರುತ್ತೇನೆಂದಿದ್ದಾನೆ. ಆತನ ಮಾತಿನ ಪ್ರಕಾರ ನೋಡಿದರೂ ಒಂದೊಂದು ಯುಗ ಕೆಲವು ಲಕ್ಷಗಳ ವರ್ಷಗಳ ಕಾಲವಿರುತ್ತದೆ. ಅಂತಹದರಲ್ಲಿ ಅವಶ್ಯಕತೆ ಬಂದು ಪ್ರತಿ ಯುಗದಲ್ಲಿ ಬಂದರೂ, ಒಂದು ಬರುವಿಕೆಗೆ ಮತ್ತೊಂದು ಬರುವಿಕೆಗು ಕೆಲವು ಲಕ್ಷ ವರ್ಷಗಳ ಅವಧಿ ಇರುತ್ತದೆ. ಅಂತದರಲ್ಲಿ ದ್ವಾಪರಯುಗ ಅಂತ್ಯದಲ್ಲಿ ಬಂದಿರುವ ಭಗವಂತನು, ತಕ್ಷಣ ಕಲಿಯುಗದಲ್ಲಿ ಕೇವಲ ಮೂರುಸಾವಿರ ವರ್ಷಗಳಿಗೆ ಬರುವುದು ಆಶ್ಚರ್ಯಪಡಬೇಕಾದ ವಿಷಯವೇ ಆಗುತ್ತದೆ. ಒಂದುಬಾರಿ ಭೂಮಿಮೇಲಕ್ಕೆ ದೈವಶಕ್ತಿಯಾದ ಭಗವಂತನು ಬಂದು ಧರ್ಮಗಳನ್ನು ನೆಲೆಗೊಳಿಸಿ ಹೋದರೆ, ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಕೆಲವು ಲಕ್ಷಗಳ ವರ್ಷಗಳು ಬೇಕಾಗುತ್ತದೆ. ಆ ಹಿನ್ನೆಲೆದಲ್ಲಿ ಒಂದೊಂದುಬಾರಿ ಭಗವಂತನ ಬರುವಿಕೆ ಸುಮಾರು ಹತ್ತು ಯುಗಗಳಿಗೆ ಒಂದುಬಾರಿ ಇರಬಹುದು. ಹಾಗಿರುವಾಗ ಕೃಷ್ಣನು ಮರಣಿಸುತ್ತಲೇ ಕಲಿಯುಗ ತಕ್ಷಣ ಪ್ರಾರಂಭವಾಗಿದೆ. ಭಗವಂತನು ಬಂದು ಧರ್ಮಗಳನ್ನು ತಿಳಿಸಿ ಹೋದ ನಂತರ ಮೂರು ಸಾವಿರ ವರ್ಷಗಳಿಗೆ ಮತ್ತೆ ದೈವಶಕ್ತಿ ಭೂಮಿಮೇಲೆ ಹುಟ್ಟಿದೆಯೆಂದು ಹೇಳಿದರೆ, ಮೂರು ಸಾವಿರ ವರ್ಷಗಳಿಗೆ ಧರ್ಮಗಳು ಅಧರ್ಮಗಳಾಗಿವೆಯಾ? ಎಂಬ ಪ್ರಶ್ನೆ ಬರುತ್ತದೆ. ಒಂದುವೇಳೆ ಅಷ್ಟು ಬೇಗನೇ ಧರ್ಮಗಳು, ಅಧರ್ಮಗಳಾಗಿ ಬದಲಾಗಿಹೋದರೆ, ದೈವಶಕ್ತಿ ಭಗವಂತನಾಗಿ ಧರ್ಮಗಳನ್ನು ತಿಳಿಸುವುದಕ್ಕೆ ಒಂದು ಯುಗದಲ್ಲಿಯೇ ಎಷ್ಟೋ ನೂರಾರು ಸಲ ಭೂಮಿಮೇಲಕ್ಕೆ ಬರಬೇಕಾಗಿ ಬರುತ್ತದೆ. ಹಾಗೆ ನಡೆಯದಂತೆ? ಒಂದು ಯುಗದಲ್ಲಿಯೇ ಧರ್ಮಗಳು ಅಧರ್ಮಗಳಾಗಿ ಎಷ್ಟೋ ನೂರಾರು ಸಲ ಬದಲಾಗಿಹೋಗುತ್ತವಾ? ಎಂದು ಪ್ರಶ್ನಿಸಿಕೊಂಡರೆ ಅದಕ್ಕೆ ಉತ್ತರ ಈ ವಿಧವಾಗಿ ಇದೆ.

ದೈವಶಕ್ತಿ ಭಗವಂತನಾಗಿ ಬರಬೇಕೆಂದರೆ ಅಧರ್ಮಗಳು ಒಂದು ಹಂತಕ್ಕೆ ಬೆಳೆಯಬೇಕು. ಅಧರ್ಮಗಳು ಒಂದು ಹಂತಕ್ಕೆ ಸೇರುತ್ತಲೇ ಭಗವಂತನ ಜನ್ಮ ತನಗೆ ತಾನಾಗಿ ಬರುತ್ತದೆ. ಹಾಗೆ ಭಗವಂತನು ಭೂಮಿಮೇಲಕ್ಕೆ ಬಂದು ಒಂದುಬಾರಿ ಧರ್ಮಗಳನ್ನು ನೆಲೆಗೊಳಿಸಿಹೋದರೆ ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಕೆಲವು ಯುಗಗಳ ಕಾಲ ಬೇಕಾಗುತ್ತದೆ. ಒಂದು ಅಂದಾಜಿನ ಪ್ರಕಾರ ಸುಮಾರು ಹತ್ತು ಯುಗಗಳಿಗೆ ಒಂದುಬಾರಿ ದೈವಶಕ್ತಿ ಮನುಷ್ಯನಾಗಿ ಭೂಮಿಮೇಲಕ್ಕೆ ಬರಬಹುದು. ಇದರಿಂದ ಸುಮಾರು ಒಂದು ಕೋಟಿ ವರ್ಷಗಳ ನಂತರ 8 ಲಕ್ಷಗಳಿಂದ 10 ಲಕ್ಷವರ್ಷಗಳೊಳಗೆ ಭಗವಂತನ ಬರುವಿಕೆ ಇರಬಹುದೆಂದು ಅಂದುಕೊಳ್ಳುತ್ತೇವೆ. ಒಂದುಬಾರಿ ಭೂಮಿ ಮೇಲೆ ಧರ್ಮಗಳನ್ನು ನೆಲೆಗೊಳಿಸಿ ಹೋದರೆ ಪುನಃ ಅವು ಅಧರ್ಮಗಳಾಗಿ ಬದಲಾಗುವುದಕ್ಕೆ ಸುಮಾರು ಹತ್ತು ಯುಗಗಳ ಕಾಲ ಬೇಕಾಗುತ್ತದೆಂದು ತಿಳಿಯುತ್ತದೆ. ಇದರಿಂದ ಭಗವಂತನ ಬರುವಿಕೆ ಬೇಗನೇ ಇರುವುದಿಲ್ಲವೆಂದು ತಿಳಿಯುತ್ತಿದೆ. ಅಂತಹದರಲ್ಲಿ ಕೃಷ್ಣನ ನಂತರ ಕೇವಲ ಮೂರುಸಾವಿರ ವರ್ಷಗಳಿಗೆ ಪುನಃ ಯೇಸು ಹುಟ್ಟಿದ್ದಾನೆಂದು ಹೇಳುವುದೇನು? ಎಂದು ಕೆಲವರು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಹತ್ತಿರದಿಂದ ಬರುವ ಉತ್ತರ ಏನೆಂದರೆ! ದೇವರು ಭೂಮಿ ಮೇಲೆ ಒಂದುಬಾರಿ ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಸ್ವಲ್ಪಕಾಲ ಬೇಕಾಗುತ್ತದೆ. ದ್ವಾಪರಯುಗ ಅಂತ್ಯದಲ್ಲಿ ಕೃಷ್ಣನು ಬಂದು ಒಂದುಬಾರಿ ಅರ್ಜುನನಿಗೆ ಮಾತ್ರ ಧರ್ಮಗಳನ್ನು ತಿಳಿಸಿದ್ದಾನೆ. ಅದೂ ಆತನು ಬಂದ ನಂತರ, ಸಮಯವನ್ನು ನೋಡಿ ಸುಮಾರು 90 ವರ್ಷಗಳ ವಯಸ್ಸಿನಲ್ಲಿ ಕೇವಲ ಒಂದುಬಾರಿ ಹೇಳುವುದು ನಡೆದಿದೆ. ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಸುಮಾರು ಕೋಟಿ 10 ಲಕ್ಷ ವರ್ಷಗಳಿಗೊಂದು ಬಾರಿ ಬರುವ ಭಗವಂತನು ಕೇವಲ ಹತ್ತು ನಿಮಿಷಗಳೊಳಗೆ ಧರ್ಮಗಳನ್ನು ಬೋಧಿಸುತ್ತಾನಾ? ಹಾಗೆ ಬೋಧಿಸುವುದು ಸಂಪೂರ್ಣವಾಗಿ ಅಧರ್ಮಗಳನ್ನು ಇಲ್ಲದಹಾಗೆ ಮಾಡಿದಂತಾಗುತ್ತದಾ? ಧರ್ಮಗಳನ್ನು ನೆಲೆಗೊಳಿಸುವುದು ಎಷ್ಟೋ ಉನ್ನತವಾದ ಕೆಲಸವಾಗಿದ್ದು, ಆ ಕೆಲಸ ಕೃಷ್ಣನ ಜನ್ಮದಲ್ಲಿಯೇ ಮಾಡಿದ್ದಾನಾ? ಒಂದುಬಾರಿ

ನೆಲೆಗೊಂಡ ಧರ್ಮಗಳು ಹತ್ತು ಕಾಲಗಳಿಗೆ ಮೇಲಾಗಿ ಎಂದರೆ ಹತ್ತು ಯುಗಗಳಿಗೆ ಮೇಲೆಯೇ ಇರಬೇಕಾಗಿ ಬರುತ್ತದೆ. ಅಷ್ಟು ದೀರ್ಘಕಾಲ ಇರಬೇಕಾದ ಧರ್ಮಗಳು ಅಷ್ಟು ಸುಲಭವಾಗಿ ಕೇವಲ ಕೆಲವು ನಿಮಿಷಗಳಲ್ಲಿ ಬೋಧಿಸುತ್ತಾನಾ! ಎಂದು ಯೋಚಿಸಬೇಕಾದ ಕೆಲಸವಿದೆ.

ಹಾಗೆ ಯೋಚಿಸಿದರೆ ತಿಳಿಯುವ ರಹಸ್ಯವೊಂದು ಇದೆ. ಈ ರಹಸ್ಯ ಸುಲಭವಾಗಿ ತಿಳಿಯುವುದಕ್ಕೆ ಒಂದು ಚಿಕ್ಕ ಉದಾಹರಣೆಯನ್ನು ತೆಗೆದುಕೊಳ್ಳೋಣ. ಒಬ್ಬ ವ್ಯಕ್ತಿಗೆ ಹತ್ತು ಲೀಟರ್‌ಗಳ ಹಾಲನ್ನು ಮಾರಬೇಕೆಂದು ಆತನ ಯಜಮಾನ ಹೇಳಿದ್ದಾನೆ. ಆಗ ಆ ವ್ಯಕ್ತಿ ಒಂದು ಊರಿನೊಳಗೆ ಹೋಗಿ ಹಾಲನ್ನು ಮಾರುವುದು ಆರಂಭಿಸಿದ್ದಾನೆ. ಹಾಲು ಯಾರಿಗೆ ಅಗತ್ಯವೊ ಕೇಳಿ ಹಾಲನ್ನು ಮಾರಿದ್ದಾನೆ. ಆದರೆ ಆ ಊರಿನಲ್ಲಿ ಕೇವಲ ಐದುಲೀಟರ್ ಹಾಲನ್ನೇ ಮಾರಿದ್ದಾನೆ. ಇನ್ನೂ ಐದು ಲೀಟರ್ ಹಾಲು ಉಳಿದಿವೆ. ಆಗ ಪಕ್ಕದ ಗ್ರಾಮಕ್ಕೆ ಹೋಗಿ ಉಳಿದ ಹಾಲನ್ನು ಮಾರಿದ್ದಾನೆ. ಮಾರಿದ ಹಾಲು ಹತ್ತು ಲೀಟರಗಳು, ತಿರುಗಿದ ಊರುಗಳು ಎರಡು, ಮಾರಿದವನು ಒಬ್ಬನೇ. ಆದರೆ ಇಲ್ಲಿ ಒಂದು ಕಾರ್ಯವನ್ನು ಗಮನಿಸೋಣ. ಮೊದಲು ಹಾಲು ಮಾರಿದ ಊರಿನಲ್ಲಿ ಎಲ್ಲರೂ ಶೂದ್ರರೇ ಇದ್ದಾರೆ. ಆದಕಾರಣ ಮಾರುವವನು ಯಾವ ಆತಂಕವಿಲ್ಲದೆ ಮಾರುತ್ತಿದ್ದನು. ಎರಡನೆ ಊರಿನಲ್ಲಿ ಎಲ್ಲರೂ ಬ್ರಾಹ್ಮಣರೆ ಇದ್ದಾರೆ. ಅವರು ಬ್ರಾಹ್ಮಣರು ಮಾರುವ ಹಾಲನ್ನೇ ಕೊಂಡುಕೊಳ್ಳುತ್ತಾರೆ. ಆದರೆ ಶೂದ್ರರು ಮಾರುವ ಹಾಲನ್ನು ಕೊಳ್ಳುವುದಿಲ್ಲ. ಮಾರುವವನು ಬ್ರಾಹ್ಮಣನಲ್ಲ. ಆದರೆ ಮಾರಬೇಕಾದ ಹಾಲು ಐದು ಲೀಟರಗಳು ಉಳಿದಿವೆ. ಆದ್ದರಿಂದ ಮಾರಬೇಕಾದ ವ್ಯಕ್ತಿ ಮೇಲಿನ ಅಂಗಿಯನ್ನು ತೆಗೆದುಹಾಕಿ, ಒಂದು ಜನಿವಾರವನ್ನು ಕತ್ತಿನಲ್ಲಿ ಹಾಕಿಕೊಂಡು, ಪಂಚೆಕಟ್ಟಿಕೊಂಡು ಆ ಊರಿನೊಳಗೆ ಹೋಗಿ ಹಾಲನ್ನು ಮಾರಿದ್ದಾನೆ. ಅಂಗಿಯಿಲ್ಲದೆ ಕೆಳಗೆ ಪಂಚೆ ಮಾತ್ರ ಕಟ್ಟಿಕೊಂಡಿರುವುದರಿಂದ, ಆತನು ಬ್ರಾಹ್ಮಣನಂತೆ ಕಾಣಿಸುತ್ತಿದ್ದಾನೆ. ಅದಲ್ಲದೆ ತನ್ನ ಹೆಸರು ಶಂಕರಯ್ಯ ಆದರೆ ಶಂಕರಶಾಸ್ತ್ರಿ ಎಂದು ಹೇಳಿಕೊಂಡಿದ್ದಾನೆ.

ಹೆಸರಿನಲ್ಲಿಯೂ, ಆಕಾರದಲ್ಲಿಯೂ ಬ್ರಾಹ್ಮಣನಾಗಿ ಕಾಣಿಸಿ ಮಾರಿರುವುದರಿಂದ ಆತನ ಐದು ಲೀಟರ್ ಹಾಲನ್ನು ಅಲ್ಲಿರುವ ಬ್ರಾಹ್ಮಣರು ಕೊಂಡುಕೊಂಡಿದ್ದಾರೆ. ಹತ್ತು ಲೀಟರ್‌ಗಳ ಹಾಲನ್ನು ಮಾರಿದ ನಂತರ ಹಾಲಿನವನಿಗೆ ಜನಿವಾರದ ಕೆಲಸವಿಲ್ಲ ಹಾಗೆಯೇ ಪಂಚೆಯಿಂದ ಕೆಲಸವಿಲ್ಲ. ಆದ್ದರಿಂದ ಅವನು ಮನೆಗೆ ಹೋಗಿ ಜನಿವಾರವನ್ನು, ಪಂಚೆಯನ್ನು ತೆಗೆದುಹಾಕಿ ತಾನು ಯಾವಾಗಲೂ ಕಟ್ಟಿಕೊಳ್ಳುವ ಲುಂಗಿಯನ್ನು ಕಟ್ಟುಕೊಂಡು ಮಲಗಿದ್ದಾನೆ. ಅಲ್ಲಿ ಹತ್ತು ಲೀಟರುಗಳ ಹಾಲನ್ನು ಮಾರುವುದು ಮುಖ್ಯವಾದ ಉದ್ದೇಶ. ಎಷ್ಟು ಊರುಗಳಲ್ಲಿ ಮಾರಿದ್ದೀಯಾ ಎಂದಾಗಲಿ, ಎಷ್ಟು ಹೊತ್ತು ಮಾರಿದ್ದೀಯಾ ಎಂದಾಗಲಿ ಹಾಲಿನ ಯಜಮಾನ ಕೇಳುತ್ತಿಲ್ಲ. ಹಾಲಿನ ಯಜಮಾನನೊಂದರ ಹಾಲನ್ನು ಹಾಲಿನವನು (ಹಾಲನ್ನು ಮಾರುವವನು) ಮಾರಬೇಕೆಂಬುದು ನಿಯಮ. ಅಷ್ಟೇಯಾಗಲಿ ಈ ಬೀದಿಯಲ್ಲೇ ಮಾರಬೇಕು, ಆ ಊರಿನಲ್ಲಿಯೇ ಮಾರಬೇಕು, ಗಂಟೆಸಮಯದಲ್ಲಿಯೇ ಮಾರಬೇಕು, ಅರ್ಧಗಂಟೆಯೊಳಗೆ ಮಾರಬೇಕು ಎಂಬ ನಿಯಮ ಇಲ್ಲ. ಆದ್ದರಿಂದ ಹಾಲಿನವನು ಹತ್ತು ಲೀಟರ್ ಹಾಲನ್ನು ಮಾರಿದರೆ ಹಾಲಿನ ಯಜಮಾನನ ಲೆಕ್ಕದಲ್ಲಿ ಹಾಲಿನವನು ಒಂದು ದಿನ ಕೆಲಸ ಮಾಡಿದಂತಾಗುತ್ತದೆ.

ಮೇಲಿನ ವಿಧವಾಗಿ ಹೋಲಿಸಿಕೊಂಡರೆ ಹಾಲಿನ ಯಜಮಾನನಿದ್ದಂತೆ ಪರಮಾತ್ಮ ಇದ್ದಾನೆ. ಹಾಲಿನವನು ಇದ್ದಂತೆ ಭಗವಂತನಿದ್ದಾನೆ. ಹಾಲಿನವನು ಮಾರುವ ಹಾಲು ಹಾಲಿನಯಜಮಾನನವೇ ಆದಂತೆ, ಭಗವಂತನು ಬೋಧಿಸುವ ಧರ್ಮಗಳು ಪರಮಾತ್ಮನವು(ದೇವರವು). ಮಾರಬೇಕಾದ ಹಾಲು ಹತ್ತು ಲೀಟರಗಳು ಆದಂತೆ ತಿಳಿಸಬೇಕಾದ ಧರ್ಮಗಳು ನೂರರಷ್ಟು. ಹಾಲಿನವನು ಹಾಲನ್ನು ಎರಡು ಊರುಗಳಲ್ಲಿ ಮಾರಿದರೂ ಫರವಾಗಿಲ್ಲ ಎಂದಹಾಗೆ ಭಗವಂತನು ಶೇ. ನೂರರಷ್ಟು ಧರ್ಮಗಳನ್ನು ಎರಡು ದೇಶಗಳಲ್ಲಿ ಹೇಳಿದರೂ ಫರವಾಗಿಲ್ಲ. ಹತ್ತು ಲೀಟರ್‌ಗಳ ಹಾಲನ್ನು ಮಾರಿದಾಗಲೆ ಹಾಲಿನವನಿಗೆ ಒಂದು ದಿನದ ಕೆಲಸವಾದಂತೆ ಲೆಕ್ಕಿಸಲ್ಪಡುತ್ತದೆ. ನೂರರಷ್ಟು ಧರ್ಮಗಳನ್ನು

ತಿಳಿಸಿದಾಗಲೇ ಭಗವಂತನಿಗೆ ಒಂದುಬಾರಿ ಧರ್ಮಗಳನ್ನು ಬೋಧಿಸಿದಂತಾಗುತ್ತದೆ. ಹಾಲಿನವನು ಹತ್ತು ಲೀಟರ್‌ಗಳ ಹಾಲನ್ನು ಮಾರುವುದಕ್ಕೆ ಎರಡು ಊರುಗಳಿಗೆ ಹೋಗಿ ಎರಡು ಊರುಗಳಲ್ಲಿ ಕಾಣಿಸಿದಂತೆ, ಭಗವಂತನು ನೂರರಷ್ಟು ಧರ್ಮಗಳನ್ನು ತಿಳಿಸುವುದಕ್ಕೆ ಎರಡು ದೇಶಗಳಿಗೆ ಹೋಗಿ ಎರಡು ದೇಶಗಳಲ್ಲಿ ಕಾಣಿಸುತ್ತಾನೆ. ಒಂದು ಊರಿನಲ್ಲಿ ಶೂದ್ರನಾಗಿ, ಒಂದು ಊರಿನಲ್ಲಿ ಬ್ರಾಹ್ಮಣನಾಗಿ ಕಾಣಿಸಿದಂತೆ ಒಂದು ದೇಶದಲ್ಲಿ ಒಬ್ಬ ಹಿಂದೂಗಳ ಪ್ರವಕ್ತನಾಗಿ, ಮತ್ತೊಂದು ದೇಶದಲ್ಲಿ ಕ್ರೈಸ್ತ ಪ್ರವಕ್ತನಾಗಿ ಕಾಣಿಸುತ್ತಾನೆ. ಹಾಲಿನವನು ಬೆಳಿಗ್ಗೆ ಆರು ಗಂಟೆಗಳಿಗೆ ಒಂದು ಊರಿನಲ್ಲಿ ಸ್ವಲ್ಪ ಹಾಲನ್ನು ಮಾರಿ, ನಂತರ ಸ್ವಲ್ಪಸಮಯಕ್ಕೆ ಏಳು ಗಂಟೆಗಳಿಗೆ ಎರಡನೆಯ ಊರಿನೊಳಗೆ ಹೋಗಿ ಅಲ್ಲಿ ಅವರ ಕುಲಸ್ಥನಾಗಿ ಕಾಣಿಸಿ, ಏಳು ಗಂಟೆಗಳಿಗೆ ಹಾಲನ್ನು ಮಾರಿದಂತೆ, ಭಗವಂತನು ಕೃಷ್ಣನಾಗಿ ದ್ವಾಪರಯುಗದ ಕೊನೆಯಲ್ಲಿ ದೇವರ ಧರ್ಮಗಳನ್ನು ಬೋಧಿಸಿ ನಂತರ ಸ್ವಲ್ಪ ಕಾಲಕ್ಕೆ (ಮೂರುಸಾವಿರ ವರ್ಷಗಳಿಗೆ) ಇಸ್ರಾಈಲ್ ದೇಶದೊಳಗೆ ಹೋಗಿ ಅಲ್ಲಿ ಅವರ ಮತಪ್ರವಕ್ತನಾಗಿ ಕಾಣಿಸಿ, ಕಲಿಯುಗದಲ್ಲಿ ದೈವಧರ್ಮಗಳನ್ನು ಬೋಧಿಸಿದ್ದಾನೆ. ಹತ್ತು ಲೀಟರ್‌ಗಳ ಹಾಲನ್ನು ಎರಡು ಊರುಗಳಲ್ಲಿ ಮಾರಿದಾಗ ಹಾಲಿನವನಿಗೆ ಒಂದು ದಿನದ ಕೆಲಸ ಆದಂತೆ, ಭಗವಂತನು ಬೇರೆಬೇರೆ ಸಮಯಗಳಲ್ಲಿ ಬೇರೆಬೇರೆ ದೇಶಗಳಲ್ಲಿ ನೂರರಷ್ಟು ಧರ್ಮಗಳನ್ನು ಬೋಧಿಸಿದಾಗಲೇ ಆತನಿಗೆ ಒಂದು ಅವತಾರದ ಕೆಲಸ ಪೂರ್ತಿ ಆದಂತಾಗುತ್ತದೆ. ಹಾಲಿನವನು ಯಜಮಾನನ ಹಾಲನ್ನು ಎಷ್ಟು ಊರುಗಳಲ್ಲಿ ಮಾರಿದರೂ, ಎಷ್ಟು ಸಮಯದಲ್ಲಿ ಮಾರಿದರೂ ಹತ್ತು ಲೀಟರ್‌ಗಳ ಹಾಲನ್ನು ಮಾರಿದಾಗಲೇ ಯಜಮಾನನ ದೃಷ್ಟಿಯಲ್ಲಿ ಒಂದು ದಿನ ಹಾಲಿನವನು ಕೆಲಸಮಾಡಿದಂತೆ ಲೆಕ್ಕಿಸಲ್ಪಡುತ್ತದೆ. ಅದೇ ವಿಧವಾಗಿ ಭಗವಂತನು ಎಷ್ಟು ದೇಶಗಳಲ್ಲಿ ಧರ್ಮಗಳನ್ನು ಹೇಳಿದರೂ, ಎಷ್ಟು ಕಾಲದಲ್ಲಿ ಹೇಳಿದರೂ, ನೂರರಷ್ಟು ಧರ್ಮಗಳನ್ನು ತಿಳಿಸಿದಾಗಲೇ, ದೇವರ ದೃಷ್ಠಿಯಲ್ಲಿ ಭಗವಂತನು ಒಂದುಬಾರಿ ಭೂಮಿಮೇಲೆ ಧರ್ಮಗಳನ್ನು ಬೋಧಿಸಿದಂತಾಗುತ್ತದೆ.

ಹಾಲಿನ ಯಜಮಾನ – ಧರ್ಮಗಳಿಗೆ ಅಧಿಪತಿಯಾದ ದೇವರು

ಹಾಲು – ಧರ್ಮಗಳು

ಹಾಲಿನವನು – ಭಗವಂತನು

ಹತ್ತು ಲೀಟರ್ ಹಾಲು – ನೂರುಶಾತ ಧರ್ಮಗಳು

ಎರಡು ಊರುಗಳು – ಎರಡು ಭೂ ಭಾಗಗಳು

ಶಂಕರಯ್ಯ – ಕೃಷ್ಣ

ಶಂಕರಶಾಸ್ತ್ರಿ – ಯೇಸು

ಹಾಲಿನವನು (ಶೂದ್ರನು) – ಭಗವಂತನು ಕೃಷ್ಣನು

ಹಾಲಿವನು (ಬ್ರಾಹ್ಮಣನು) – ಭಗವಂತನು ಪ್ರವಕ್ತ

ಮಾರಿದ ಸಮಯ – ಬೋಧಿಸಿದ ಕಾಲ

ಆರು ಗಂಟೆಗಳ ಸಮಯದಲ್ಲಿ – ದ್ವಾಪರಯುಗದಲ್ಲಿ

ಏಳು ಗಂಟೆಗಳ ಸಮಯದಲ್ಲಿ – ಕಲಿಯುಗದಲ್ಲಿ

ಹಾಲನ್ನು ಮಾರುವುದು – ಧರ್ಮಗಳನ್ನು ಬೋಧಿಸುವುದು

ಒಂದು ದಿನದ ಕೆಲಸ – ಒಂದು ಅವತಾರದ ಕೆಲಸ

ಹಾಲನ್ನು ಕೊಂಡವರು – ಧರ್ಮಗಳನ್ನು ತಿಳಿದುಕೊಂಡವರು

ಹಾಲನ್ನು ಕೊಂಡ ಒಂದುಊರು –ಮೊದಲು ಧರ್ಮಗಳನ್ನು ತಿಳಿದ ದೇಶ **ಭಾತರದೇಶ.**

ಹಾಲನ್ನು ಕೊಂಡ ಎರಡನೆ ಊರು – ನಂತರ ಧರ್ಮಗಳನ್ನು ತಿಳಿದ ದೇಶ **ಇಸ್ರಾಈಲ್ ದೇಶ.**

ಒಂದು ಉದ್ದವಾದ ಸರಳರೇಖೆ ಇದೆಯೆಂದುಕೊಳ್ಳಿ. ಆ ರೇಖೆಗೆ ಎರಡು ದೃವಗಳಿರುತ್ತವೆ. ಆ ಎರಡು ಧೃವಗಳನ್ನು ಸೇರಿಸುವ ಮಧ್ಯರೇಖೆ ಇರುತ್ತದೆ. ರೇಖೆ ಎಂದರೆ ಗೀಚಿದ ಗೆರೆ ಎಂದು ಎಲ್ಲರಿಗೂ ತಿಳಿದಿದೆ. ಒಂದು ಗೆರೆಗೆ ಎರಡು ಧೃವಗಳು, ಆ ಎರಡು ಧೃವಗಳನ್ನು ಸೇರಿಸುವ ಗೆರೆ ಇರುತ್ತದೆ. ಕೆಳಗಿರುವ ಚಿತ್ರದಲ್ಲಿ ನೋಡಿರಿ.




ಚಿತ್ರದಲ್ಲಿ ಕಾಣಿಸುವ ಒಂದನೆಯ ಕೊನೆ ಉತ್ತರ ಧೃವ, ಹಾಗೆಯೇ ಎರಡನೆ ಕೊನೆ ದಕ್ಷಿಣ ಧೃವ. ಒಂದು ಎರಡು ಕೊನೆಗಳನ್ನು ಸೇರಿಸುತ್ತಿರವ ರೇಖೆಯನ್ನು ಎರಡು ಧೃವಗಳನ್ನು ಏಕಸ್ಥಾಯಿಯಾಗಿ ಸಮಾನವಾಗಿ ತೋರಿಸುವ ಗೀತೆ ಎಂದು ಕರೆಯುತ್ತಿದ್ದೇವೆ. ಗೀತೆ ಇದೆ ಎಂದರೆ ಧೃವಗಳಿರುತ್ತವೆ. ಎರಡು ಧೃವಗಳು ಇವೆಯೆಂದರೆ ನೋಡುವುದಕ್ಕೆ ಅವು ಒಂದಕ್ಕೊಂದು ವಿರುದ್ಧ ದಿಕ್ಕುಗಳಲ್ಲಿ ಇರುತ್ತವೆ. ವಿರುದ್ಧ ದಿಕ್ಕುಗಳಲ್ಲಿ ಎರಡು ಧೃವಗಳಿದ್ದರೂ, ಎರಡನ್ನು ಸಮಾನವಾಗಿ ನೋಡುವ ಗೀತೆ ಇರುತ್ತದೆ. ಒಟ್ಟಾರೆ ಹೇಳಬೇಕೆಂದರೆ ಒಂದು ಗೀತೆ ಮೂರು ಭಾಗಗಳಾಗಿ ಇದೆಯೆಂದು ತಿಳಿಯುತ್ತಿದೆ. ಇದನ್ನನುಸರಿಸಿ ಗೀಚಲ್ಪಟ್ಟಿರುವ ಗೆರೆ ಕೂಡ ತ್ರೈತದೊಂದಿಗೆ ಕೂಡಿಕೊಂಡು ಇರುವುದೆಂದು ತಿಳಿಯುತ್ತಿರುವುದು. ಈಗ ಅಸಲು ವಿಷಯಕ್ಕೆ ಬರೋಣ. ಭಗವಂತನು ತಿಳಿಸಿರುವುದು ಭಗವದ್ಗೀತೆ, ಭಗವಂತನು ಹೇಳಿದ ಗೀತೆಗು ಸಹ ತ್ರೈತವು ಅನ್ವಯಿಸುತ್ತದೆ. ಭಗವಂತನ ಗೀತೆ ಮೂರು ಭಾಗಗಳಾಗಿ ಇದ್ದು ಮೂವರು ಪುರುಷರನ್ನು ತಿಳಿಸುತ್ತಿದೆ. ಭಗವಂತನಿಂದ ಗೀಚಲ್ಪಟ್ಟ ಗೀತೆಗು ಸಹ ಎರಡು ಧೃವಗಳು ಇವೆ. ಭಗವದ್ಗೀತೆ ಸಹ ಒಂದುಕೊನೆ ಉತ್ತರ ಧೃವವಾಗಿ, ಎರಡನೆ ಕೊನೆ ದಕ್ಷಿಣ ಧೃವವಾಗಿ ಇದೆ. ಉತ್ತರ ಧೃವ ದೇವರು, ದಕ್ಷಿಣ ಧೃವ ಜೀವಿಯೆಂದು ಇದರ ಅರ್ಥ. ಉತ್ತರ ಧೃವವಾಗಿರುವ ಮೊದಲನೆ ಕೊನೆ ಭಾಗ ಪರಮಾತ್ಮಯೆಂದು, ದಕ್ಷಿಣ ಧೃವವಾಗಿರುವ ಎರಡನೆಯ ಕೊನೆಯಭಾಗ ಜೀವಾತ್ಮಯೆಂದು, ಅವುಗಳಿಗೆ ಮಧ್ಯದಲ್ಲಿರುವ ಗೆರೆ ಜೀವಾತ್ಮವನ್ನು ಪರಮಾತ್ಮನನ್ನು ಏಕ ಮಾಡುವ ಆತ್ಮ ಎಂದು ತಿಳಿಯುತ್ತಿದೆ. ಸಮಸ್ತ ಜಗತ್ತಿನಲ್ಲಿ ಯಾವ ಜೀವಾತ್ಮವಾದರೂ ಪರಮಾತ್ಮನನ್ನು ಸೇರಬೇಕೆಂದರೆ ಆತ್ಮ ಮೂಲಕವೇ ಸಾಧ್ಯವಾಗುತ್ತದೆ. ಜೀವಾತ್ಮಗೆ ದಾರಿ ಆತ್ಮವೆ. ಆತ್ಮ ದಾರಿಯಲ್ಲಿ ಪ್ರಯಾಣಿಸಿದರೇನೆ ಪರಮಾತ್ಮ ಎಂಬ ಗಮ್ಯ(ಗುರಿ)ವನ್ನು ಸೇರಬಹುದು. ಆದ್ದರಿಂದ ದೇವರನ್ನು

ಸೇರಬೇಕೆಂಬ ಯಾವ ಜೀವಿಯಾದರೂ ಆತ್ಮವನ್ನು ಅಧ್ಯಯನ ಮಾಡಬೇಕಾಗಿದ್ದೇ, ಇದು ಶಾಸನ. ಆತ್ಮವನ್ನು ಕುರಿತು ಅಧ್ಯಯನ ಮಾಡುವುದನ್ನೇ ಆಧ್ಯಾತ್ಮಿಕ ಎನ್ನುತ್ತೇವೆ. ಆಧ್ಯಾತ್ಮಿಕ ತಿಳಿಯದೇ ಜಗತ್ತಿನಲ್ಲಿ ಯಾರಿಗೂ ಮುಕ್ತಿ ಲಭಿಸುವುದಿಲ್ಲ.

ಗೀಚಲ್ಪಟ್ಟ ಗೆರೆ ಮೂರು ಭಾಗಗಳಾಗಿ ಇದ್ದಂತೆ, ಹೇಳಲ್ಪಟ್ಟ ಗೀತೆ ಮೂರು ಭಾಗಗಳಾಗಿ ಇದೆ. ತನ್ನ ಗೀತೆ ತ್ರೈತದಿಂದ ಕೂಡಿಕೊಂಡಿದೆಯೆಂದು, ಮೂರು ಭಾಗಗಳಾಗಿ ಪ್ರಜೆಗಳಿಗೆ ತಿಳಿಯಲ್ಪಡುತ್ತದೆಂದು ತಿಳಿದ ಕೃಷ್ಣನು, ಆ ರಹಸ್ಯವನ್ನು ಕೊನೆಯಲ್ಲಿ ಬೇಟೆಗಾರನಿಗೆ ಹೇಳಿಹೋಗಿದ್ದಾನೆ. ಹಾಲಿನವನು ಎರಡು ಊರುಗಳಲ್ಲಿ ಹಾಲು ಮಾರಿದಂತೆ, ಭಗವಂತನು ಎರಡು ಸಮಯಗಳಲ್ಲಿ ಎರಡು ದೇಶಗಳಲ್ಲಿ ತನ್ನ ಬೋಧನೆಯನ್ನು ತಿಳಿಸಬೇಕಾಗಿದೆ. ಭೋಜನ ಮಾಡುವವನು ಮಜ್ಜಿಗೆಯೊಂದಿಗೆ ತಿಂದಾಗಲೇ ಅದು ಸಂಪೂರ್ಣವಾದ ಭೋಜನವೆಂದುಕೊಂಡಂತೆ, ಕೊನೆಯಲ್ಲಿ ಮೂರನೆ ಬಾರಿ ಬೋಧನೆಯೊಂದರ ವಿವರವನ್ನು ತಿಳಿದಾಗ ಸಂಪೂರ್ಣವಾಗಿ ಹೇಳಿದಂತಾಗುತ್ತದೆ. ಗೀಚಲ್ಪಟ್ಟ ಗೆರೆ ಮೂರು ಭಾಗಗಳಿರುವಂತೆ, ಹೇಳಲ್ಪಟ್ಟ ಗೀತೆ ಮೂರು ಭಾಗಗಳಾಗಿ ಇರಬೇಕು. ಹಾಗೆಯೇ ಹೇಳಲ್ಪಟ್ಟ ಗೀತೆ ಮೂರು ಆತ್ಮಗಳನ್ನು ತಿಳಿಸುವುದಾಗಿ ಇರಬೇಕು. ಈ ಸೂತ್ರ ಅನ್ವಯಿಸಿದಾಗ ಅದು ಭಗವಂತನು ಮಾನವನಿಗೆ ಬೋಧಿಸಿದ ಬೋಧನೆ ಆಗುತ್ತದೆ. ಯಾವಾಗಾದರೆ ಕೃಷ್ಣನು ಅರ್ಜುನನಿಗೆ ಧರ್ಮಗಳನ್ನು ಯುದ್ಧರಂಗದಲ್ಲಿ ತಿಳಿಸಿದ್ದಾನೋ, ಆಗ ಹಾಲಿನವನು ತನ್ನ ಹಾಲನ್ನು ಒಂದು ಊರಿನಲ್ಲಿ ಮಾರಿದಂತಾಗಿದೆ. ಇನ್ನೂ ಕೆಲವು ಧರ್ಮಗಳನ್ನಾಗಲಿ ಅಥವಾ ಒಂದು ಧರ್ಮವನ್ನಾಗಲಿ ಮತ್ತೊಂದು ಕಾಲದಲ್ಲಿ ಮತ್ತೊಂದು ದೇಶದಲ್ಲಿ ಹೇಳಬೇಕೆಂದು ಕೃಷ್ಣನಿಗೆ ತಿಳಿದಿದೆ. ಹಾಗೆ ಎರಡನೆ ಬಾರಿ ಎರಡನೆ ಕಡೆ ತಾನೇ ಹೇಳಬೇಕೆಂದು, ಹಾಗೆ ಹೇಳಿರುವುದನ್ನೇ ಮೂರನೆಬಾರಿ ತಾನೇ ವಿವರಿಸಬೇಕೆಂದು ಸಹ ಕೃಷ್ಣನಿಗೆ ತಿಳಿದಿದೆ. ಹಾಗೆ ಮೂರು ಬಾರಿ ಮಾಡಿದಾಗ ತಾನು ಒಂದು ಬಾರಿ ಭೂಮಿಮೇಲೆ ಧರ್ಮಗಳನ್ನು

ತಿಳಿಸಿದಂತಾಗುತ್ತದೆ. ಆದ್ದರಿಂದ ತನ್ನ ಪ್ರಣಾಳಿಕೆಯನ್ನು ಅಥವಾ ಪಥಕವನ್ನು ಮೊದಲೇ ತಿಳಿಸಿದಂತೆ ಆಧಾರಕ್ಕಾಗಿ, ಬೇಟೆಗಾರನಿಗೆ ತನ್ನ ಎರಡನೇ ಬರುವಿಕೆಯನ್ನು, ಮೂರನೇ ಬರುವಿಕೆಯನ್ನು ಕುರಿತು ಸಮಚಾರವನ್ನು ತಿಳಿಸಿ ಹೋಗಿದ್ದಾನೆ. ಆ ಸಮಾಚಾರ ಬೇಟೆಗಾರನಿಗೆ ಸ್ವಲ್ಪವೂ ಅಗತ್ಯವಿಲ್ಲ. ಆದರೂ ಕೃಷ್ಣನು ತನ್ನ ಮರಣಕಾಲದಲ್ಲಿ ಹೇಳಿದ್ದಾನೆ. ಎರಡನೆಬಾರಿ ಬಂದಾಗ ಈ ಸಮಾಚಾರವನ್ನು ಹೇಳಿದರೆ ಯಾರೂ ನಂಬುವುದಿಲ್ಲ. ಕೃಷ್ಣನ ಹೆಸರು ಹೇಳಿಕೊಂಡು ಯೇಸು ದೊಡ್ಡವನೆನಿಸಿ ಕೊಂಡಿದ್ದಾನೆಂದು ಯಾರಾದರೂ ಅನ್ನುತ್ತಾರೆ. ಉದಾಹರಣೆಗೆ ಈಗ ನಮಗೆ ತಿಳಿದ ಒಬ್ಬ ಉದ್ಯೋಗಿ ನಾನು ಹೋದ ಜನ್ಮದಲ್ಲಿ ಮಹಾತ್ಮಾಗಾಂಧಿಯೆಂದು ಹೇಳಿಕೊಂಡರೆ ಯಾರೂ ನಂಬುವುದಿಲ್ಲ. ಆ ಉದ್ಯೋಗಿ ಹೇಳಿದಹಾಗೆ, ಆತನು ಹೋದ ಜನ್ಮದಲ್ಲಿ ನಿಜವಾಗಲೂ ಗಾಂಧೀಯೇ ಆಗಿದ್ದರೂ ಯಾರೂ ನಂಬುವ ಸ್ಥಿತಿಯಲ್ಲಿ ಇರುವುದಿಲ್ಲ. ಮೇಲಾಗಿ ಆ ಮಾತನ್ನು ಹೇಳುವುದರಿಂದ ಇವನು ತನ್ನ ಅಧಿಕಾರಿಗಳ ಹತ್ತಿರ ಗೌರವವನ್ನು ಸಂಪಾದಿಸಿಕೊಳ್ಳುವುದಕ್ಕೆ ಹಾಗೆ ಹೇಳುತ್ತಿದ್ದಾನೆಂದು ಅನ್ನುತ್ತಾರೆ. ಹಾಗಲ್ಲದೆ ಗಾಂಧೀ ಬದುಕಿರುವಾಗ, ಮರಣಿಸದಮುಂಚೆ ಬರುವಂತಹ ಜನ್ಮದಲ್ಲಿ ಇಂತಹ ವ್ಯಕ್ತಿಯಾಗಿ ಹುಟ್ಟಿ, ಇಂತಹ ಉದ್ಯೋಗ ಮಾಡುತ್ತೇನೆಂದು ಹೇಳಿದ್ದರೆ ಪ್ರಸ್ತುತ ಕಾಲದಲ್ಲಿ ಆ ವ್ಯಕ್ತಿ ಆ ಉದ್ಯೋಗಿಯಾಗಿ ಇರುವಾಗ, ಯಾರಾದರೂ ಈತನು ಇಂತಹ ಗಾಂಧೀ ಎಂದು ಗುರುತಿಸಬಲ್ಲರು ಮತ್ತು ಗೌರವವಾಗಿ ನೋಡಬಲ್ಲರು.

ಏನಾದರೂ ನಡೆಯದ ಮುಂಚೆಯೆ ಹೇಳಿದರೆ ಹೇಳಿದವನಿಗೆ ನಡೆದ ಕಾರ್ಯಕ್ಕೆ ಬೆಲೆ ಇರುತ್ತದೆ. ಹಾಗಲ್ಲದೆ ನಡೆದ ನಂತರ ಹೇಳಿದರೆ ನಡೆದ ಕೆಲಸಕ್ಕಾಗಲಿ, ಹೇಳಿದ ವ್ಯಕ್ತಿಗಾಗಲಿ ಬೆಲೆ ಇರುವುದಿಲ್ಲ. ಆದ್ದರಿಂದ ನಡೆಯುವಂತದ್ದನ್ನು ಕುರಿತು ಕೃಷ್ಣನು ಮೊದಲೇ ಹೇಳಿದ್ದಾನೆ. ಆ ಬೆಲೆಯುಳ್ಳ ಸಮಾಚಾರವನ್ನು ಕೇಳಿದ ವ್ಯಕ್ತಿ ಕೂಡಲೇ ಹೊರಗೆ ಹೇಳದೆಹೋದರೂ, ನಂತರ ಹೇಳುವುದರಿಂದ ಕೃಷ್ಣನು ಹೇಳಿದ ಸಮಾಚಾರಕ್ಕೆ ಬೆಲೆ ಕೈಗೂಡಿದೆ.

ಕೃಷ್ಣನು ಬದುಕಿರುವಾಗ ಹೇಳಿದ ಗೀತೆಯಲ್ಲಿ, ನಾನು ಧರ್ಮಗಳನ್ನು ಸಂಸ್ಥಾಪನೆ ಮಾಡುವುದಕ್ಕೆ ಯುಗಯುಗದಲ್ಲಿ, ನನ್ನನ್ನು ನಾನು ಸೃಜಿಸಿಕೊಂಡು ಬರುತ್ತೇನೆಂದು ಹೇಳಿದ್ದಾನೆ. ಹಾಗೆಯೇ ಯೇಸುವಾಗಿ ಬಂದ ಸಮಯದಲ್ಲಿ ಸಹ ನಂತರ ನಾನು ಬರುತ್ತೇನೆಂದು ಹೇಳಿದ್ದಾನೆ. ಕೃಷ್ಣನಾಗಿ ಬಂದಿರುವಶಕ್ತಿ, ಯೇಸುವಾಗಿ ಬರುತ್ತೇನೆಂದು ಭಗವದ್ಗೀತೆಯಲ್ಲಿಯೂ, ಯೇಸುವಾಗಿ ಬಂದಿರುವ ವ್ಯಕ್ತಿ ಆದರಣಕರ್ತನಾಗಿ ಇಂತಹ ಅಡ್ರಸ್‌ನಲ್ಲಿ ಬರುತ್ತೇನೆಂದು ಬೈಬಲ್‌ನಲ್ಲಿಯೂ ಹೇಳಲಿಲ್ಲ. ಮುಖ್ಯವಾಗಿ ಈ ಕಾರಣದಿಂದ ಕೃಷ್ಣನ ಭಕ್ತರಾದವರು ಯೇಸುನನ್ನು, ಯೇಸು ಭಕ್ತರಾದವರು ಕೃಷ್ಣನನ್ನು ಸ್ವಲ್ಪವೂ ನಂಬದಂತಿದ್ದಾರೆ. ಕೃಷ್ಣನನ್ನು, ಯೇಸುನನ್ನು ಬೇರೆಬೇರೆ ವ್ಯಕ್ತಿಗಳಾಗಿ ಲೆಕ್ಕಿಸಿ ಕೃಷ್ಣನನ್ನು ಕ್ರೈಸ್ತರು, ಯೇಸುವನ್ನು ಹಿಂದೂಗಳು ಅಸೂಯೆಯಿಂದ ದೂಷಿಸುತ್ತಿದ್ದಾರೆ. ಇಬ್ಬರೂ ಎರಡು ಮತಗಳನ್ನು ಸೃಷ್ಟಿಸಿಕೊಂಡು ಮತವೆಂಬ ಮತ್ತಿನಲ್ಲಿ ಒಂದು ಮತಕ್ಕೆ ಮತ್ತೊಂದು ಮತ ವಿರೋಧ ಎನ್ನುವಂತೆ ಪ್ರವರ್ತಿಸುತ್ತಿದ್ದಾರೆ. ಇದಕ್ಕೆಲ್ಲಾ ಕಾರಣ ಕೃಷ್ಣ ಎಂಬ ಹೆಸರಿನಿಂದ ಐದುಸಾವಿರದ ನೂರಹದಿನೇಳು (5117) ವರ್ಷಗಳ ಕೆಳಗೆ ಬಂದಿರುವ ವ್ಯಕ್ತಿಯೇ, ಎರಡುಸಾವಿರದ ಹದಿನಾಲ್ಕು (2014) ವರ್ಷಗಳ ಕೆಳಗೆ ಯೇಸುವಾಗಿ ಬಂದಿದ್ದಾನೆಂದು ಯಾರೂ ಗುರುತಿಸಲಾರದೆ ಹೋಗಿದ್ದಾರೆ. ಈಗ ನಾನು ಹೇಳುವ ಈ ಸಮಾಚಾರವು ಸ್ವಲ್ಪಜನ ಕ್ರೈಸ್ತರಿಗೆ ಇಷ್ಟವಾಗದೆ ಹೋಗಬಹುದು. ಹಾಗೆಯೇ ಸ್ವಲ್ಪಜನ ಹಿಂದೂಗಳಿಗೂ ಸಹ ನನ್ನ ಮೇಲೆ ಕೋಪವನ್ನು ತರಿಸುತ್ತದೆ. ಅದರೂ ದೇವರ ವಿಷಯವನ್ನು ತಿಳಿದು, ಸತ್ಯವನ್ನು ಮುಚಿಟ್ಟು ಹೊರಗೆ ಹೇಳದೆಹೋದರೆ ಅದು ಭಯಂಕರ ಪಾಪವಾಗುತ್ತದೆ. ಆದ್ದರಿಂದ ಯಾರು ಏನೆಂದುಕೊಂಡರೂ ತಪ್ಪದೆ ಹೇಳಬೇಕಾಗಿ ಬಂದಿದೆ.

**"ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಾಗುವುದಿಲ್ಲ"** ಎಂಬ ಸೂತ್ರವನ್ನು ಅನುಸರಿಸಿ ನೋಡಿದರೆ, ಎಷ್ಟುಜನ ಅಲ್ಲ ಇಲ್ಲ ಎಂದರೂ ಸತ್ಯವು ಜೀವಿಸಿಯೇ ಇರುತ್ತದೆ. ಕೊನೆಗೆ ಯಾರಾದರೂ ಸತ್ಯವನ್ನು ಒಪ್ಪಿಕೊಳ್ಳದೆ ತಪ್ಪೋಲ್ಲ. ಕೃಷ್ಣನು ಯೇಸುವಾಗಿ ಬಂದಿದ್ದಾನೆಂದು ಹೇಳುವುದು ಸತ್ಯ,

ಆದಕಾರಣ ಆ ಮಾತನ್ನು ಆಲೋಚಿಸಿ ನೋಡಿದರೆ ಯಾರಿಗಾದರೂ ಸತ್ಯವಾಗಿ ಕಾಣಿಸುತ್ತದೆ. ಕೃಷ್ಣನ ಜೀವನ ಕಳೆದುಹೋಗಿ 5017 ವರ್ಷಗಳಾಗಿದೆ. ಹಾಗೆಯೇ ಯೇಸು ಜೀವನ ಕಳೆದುಹೋಗಿ ಇಲ್ಲಿಗೆ 2014 ವರ್ಷಗಳಾಗಿದೆ. ಇಬ್ಬರ ಜೀವನಗಳು ಕಳೆದುಹೋಗಿರುವವೇ ಆದ್ದರಿಂದ ಕಳೆದುಹೋದ ಚರಿತ್ರೆಯನ್ನು ಯಾರೂ ಅಲ್ಲಗಳೆಯುವುದಿಲ್ಲ. ಕೃಷ್ಣನು ಹುಟ್ಟಿದ್ದಾನೆ, ಹಾಗೆಯೇ ಯೇಸು ಹುಟ್ಟಿದ್ದಾನೆ. ಯಾರಿಗಾದರೂ ಜೀವನದಲ್ಲಿ ಜನನ ಮತ್ತು ಮರಣಗಳು ಎರಡೂ ಮುಖ್ಯವಾದ ಘಟ್ಟಗಳು, ಈಗ ಮುಖ್ಯ ಘಟ್ಟವಾದ ಕೃಷ್ಣನ ಜನ್ಮವನ್ನು, ಯೇಸು ಜನ್ಮವನ್ನು ಗಮನಿಸಿ ನೋಡೋಣ. ಕೃಷ್ಣನು ಹಾಳುಬಿದ್ದ ಸೆರೆಮನೆಯಲ್ಲಿ, ಅಶುಭ್ರವಾದ ಕಡೆ, ತಾಯಿ ಪಕ್ಕ ತಂದೆ ಹೊರತು ಯಾರೂ ಇಲ್ಲದ ದೀನಸ್ಥಿತಿಯಲ್ಲಿ ಹುಟ್ಟಿದ್ದಾನೆ. ಯೇಸು ಸಹ ಹಾಳುಬಿದ್ದ ಪಶುಗಳಶಾಲೆಯಲ್ಲಿ, ಅಶುಭ್ರವಾದ ಕಡೆ, ತಾಯಿ ಪಕ್ಕ ತಂದೆ ಹೊರತು ಯಾರೂ ಇಲ್ಲದ ದೀನಸ್ಥಿತಿಯಲ್ಲಿ ಹುಟ್ಟಿದ್ದಾನೆ. ಜೀವನವೊಂದರ ಪ್ರಾರಂಭ ಘಟ್ಟದಲ್ಲಿ ನಡೆದ ವಿಧಾನವನ್ನು ಇತ್ತ ಹಿಂದೂಗಳು, ಅತ್ತ ಕ್ರೈಸ್ತರು ಯುಕ್ತಿಯನ್ನುಪಯೋಗಿಸಿ ಯೋಚಿಸಿದರೆ ಕೃಷ್ಣನು, ಯೇಸು ಇಬ್ಬರೂ ಒಬ್ಬರೇ ಎಂಬುದಕ್ಕೆ ಮೊದಲೆ ಸಾಕ್ಷ್ಯವು ದೊರೆಯುತ್ತಿದೆ. ನಂತರ ನೋಡಿದರೆ ಕೃಷ್ಣನು ಹುಟ್ಟಿರುವುದು ಅಪಾಯದ ಸಮಯ, ಹಾಗೆಯೇ ಯೇಸು ಹುಟ್ಟಿರುವುದು ಸಹ ಅಪಾಯದ ಸಮಯವೆ. ಕೃಷ್ಣನು ಹುಟ್ಟಿದ್ದಾನೆಂದು ತಿಳಿಯುತ್ತಲೇ ಆತನನ್ನು ಸಾಯಿಸುವುದಕ್ಕೆ ಆ ದೇಶರಾಜನು ಸಿದ್ಧವಾಗಿದ್ದಾನೆ. ಹಾಗೆಯೇ ಯೇಸು ಹುಟ್ಟಿದ್ದಾನೆಂದು ತಿಳಿಯುತ್ತಲೇ ಆತನನ್ನು ಸಾಯಿಸುವುದಕ್ಕು ಸಹ ಆ ದೇಶರಾಜು ಸಿದ್ಧವಾಗಿದ್ದಾನೆ. ಕೃಷ್ಣನು ಹುಟ್ಟುತ್ತಲೇ ಸ್ವಲ್ಪಸಮಯಕ್ಕೆ ಹುಟ್ಟಿದ ಕಡೆ ಇಲ್ಲದಂತೆ ತಂದೆಯಾಗಿರುವ ವಸುದೇವನು ಪಕ್ಕ ಪ್ರಾಂತಕ್ಕೆ ತೆಗೆದುಕೊಂಡು ಹೋದನು. ಹಾಗೆಯೇ ಯೇಸು ಹುಟ್ಟಿದ ಸ್ವಲ್ಪಹೊತ್ತಿಗೇ ಆತನ ತಂದೆಯಾಗಿರುವ ಯೋಸೇಫ, ಹುಟ್ಟಿದ ಕಡೆ ಇಲ್ಲದಂತೆ ಪಕ್ಕದ ಪ್ರಾಂತಕ್ಕೆ ತೆಗೆದುಕೊಂಡು ಹೋಗಿದ್ದಾನೆ. ಕೃಷ್ಣನಾಗಲಿ, ಯೇಸುವಾಗಲಿ ಇಬ್ಬರೂ ರಾತ್ರಿ ಸಮಯವೇ ಹುಟ್ಟಿದ್ದಾರೆ. ರಾತ್ರಿ ಸಮಯ ಹುಟ್ಟಿದವರು ಆ ರಾತ್ರಿಗೇ ಹುಟ್ಟಿದ ಸ್ಥಳದಲ್ಲಿ ಇಲ್ಲದಂತೆ ಅಲ್ಲಿಗೆ ದೂರವಾಗಿ

ಸ್ವಲ್ಪಕಾಲ ಅಜ್ಞಾತವಾಗಿ ಬೆಳೆದಿದ್ದಾರೆ. ಕೃಷ್ಣನು ಯೇಸು ಇಬ್ಬರೂ ಒಂದೇಯೆಂದು ತಿಳಿಯುವುದಕ್ಕೆ ಒಂದೇ ಹೋಲಿಕೆ ಇರುವ ಸಂಘಟನೆಗಳು ಅವರು ಹುಟ್ಟಿದ ದಿನದಂದು ನಡೆದಿವೆ. ಸ್ವಲ್ಪ ತಿಳುವಳಿಕೆಯನ್ನು ಉಪಯೋಗಿಸಿ ನೋಡಿದರೂ, ಅವರಿಬ್ಬರ ಜನನ ರಹಸ್ಯ ತಿಳಿದುಹೋಗುತ್ತದೆ. ಅವರಿಬ್ಬರು ಒಬ್ಬರಲ್ಲ ಎಂಬುವುದಕ್ಕೆ ಸಾಧ್ಯವಿಲ್ಲದೆ, ಅವರಿಬ್ಬರ ಹುಟ್ಟುವಿಕೆ ಒಂದೇ ವಿಧವಾಗಿ ನಡೆದಿವೆ.

ಮೇಲಿನ ಸಮಾಚಾರವನ್ನು ನೋಡಿದ ನಂತರ ಯೇಸು ಎಂಬ ವ್ಯಕ್ತಿ ಸಾಕ್ಷಾತ್ತೂ ಶ್ರೀಕೃಷ್ಣನೇ ಎಂದು ತಿಳಿಯುತ್ತಿದೆ. ಈ ಸಮಾಚಾರದಿಂದ ಯೇಸು ಸಹ ಗುರುವೆ ಎಂದು ತಿಳಿಯುತ್ತಿದೆ. ಇದರಿಂದ ಗ್ರಂಥದಲ್ಲಿ ಮೇಲೆ ಬರೆದುಕೊಂಡ **"ಮೂರು ಗ್ರಂಥಗಳು, ಇಬ್ಬರು ಗುರುಗಳು, ಒಬ್ಬ ಬೋಧಕನು"** ಪೂರ್ತಿಯಾಗಿ ತಿಳಿದುಹೋಗಿದೆ. ಮೂರು ಗ್ರಂಥಗಳನ್ನು ಹೇಳಿದವರಲ್ಲಿ ಕೃಷ್ಣನು, ಯೇಸು ಇಬ್ಬರೂ ಗುರುಗಳಾಗಿದ್ದು, ಜಿಬ್ರಯೇಲ್ ಬೋಧಕನಾಗಿ ಇದ್ದಾನೆ. ಕೃಷ್ಣನು, ಯೇಸು ಇಬ್ಬರೂ ಸಾಮಾನ್ಯ ಮನುಷ್ಯರಾಗಿದ್ದೂ ಜಿಬ್ರಯೇಲ್ ಗ್ರಹವಾಗಿ ಇದ್ದಾನೆ. ಬೋಧಕನಾದ ಜಿಬ್ರಯೇಲ್ ದೇವರ ಪಾಲನೆಯಲ್ಲಿನ ಒಬ್ಬನಾಗಿದ್ದು, ಕೃಷ್ಣನು, ಯೇಸು ಇಬ್ಬರೂ ದೇವರ ಪಾಲನೆಯಲ್ಲಿನವರೆ ಅಲ್ಲದೆ ದೇವರ ಪಾಲನೆಯಿಂದ ಪಾಲಿಸಲ್ಪಡುವವರಾಗಿ ಇದ್ದಾರೆ. ಕೃಷ್ಣನು ದ್ವಾಪರಯುಗದಲ್ಲಿ, ಯೇಸು ಕಲಿಯುಗದಲ್ಲಿ ಇದ್ದ ಅವರು ಸಾಧಾರಣ ಮನುಷ್ಯರಂತೆ ಕಷ್ಟ ಸುಖಗಳನ್ನು ಅನುಭವಿಸುವುದರಿಂದ ಉಳಿದ ಪ್ರಜೆಗಳು ಅವರನ್ನು ಸಾಧಾರಣ ವ್ಯಕ್ತಿಗಳಾಗಿಯೇ ಲೆಕ್ಕಿಸಿದ್ದಾರೆ. **ದ್ವಾಪರಯುಗದಲ್ಲಿ ಕೃಷ್ಣನು ಮರಣಿಸಿದ ನಂತರ "ಭಗವದ್ಗೀತೆ" ಹೊರಗೆ ಬಂದಿದೆ. ಕಲಿಯುಗದಲ್ಲಿ ಯೇಸು ಸಹ ಮರಣಿಸಿದ ನಂತರ "ಸುವಾರ್ತೆ ಬೈಬಲ್" ಹೊರಗೆ ಬಂದಿದೆ**. ಭಗವದ್ಗೀತೆಯನ್ನು ಆ ದಿನದ ವ್ಯಾಸನು ಬರೆದರೆ, ಕಲಿಯುಗದಲ್ಲಿ ಯೇಸು ಬದುಕಿರುವಾಗ ಆತನ ಹತ್ತಿರ ಇದ್ದು ಯೇಸು ಮಾತನಾಡಿದಾಗ ಕೇಳಿದ ವಾಕ್ಯಗಳನ್ನು ಆತನ ಶಿಷ್ಯರು ನಾಲ್ವರು ಜನರು ನಾಲ್ಕು ಸುವಾರ್ತೆಗಳನ್ನಾಗಿ ಬರೆದಿದ್ದಾರೆ. ಈ ದಿನ ಭಗವದ್ಗೀತೆ ಹಿಂದೂಗಳ ಗ್ರಂಥವಾದರೂ ಕೆಲವರು ಹಿಂದೂಗಳಿಗೆ ಭಗವದ್ಗೀತೆ ನಮಗೆ

ಪ್ರಮಾಣ ಗ್ರಂಥವೆಂದು ತಿಳಿದಿಲ್ಲ. ಭಗವದ್ಗೀತೆ ಎಂದರೆ ಸರಿಹೋಗದ ಹಿಂದೂಗಳು ಬಹಳಜನ ಇದ್ದಾರೆ. ತಮ್ಮ ಗ್ರಂಥಯಾವುದೋ, ತಮ್ಮ ದೇವರ್‍ಯಾರೋ ತಿಳಿಯದ ಸ್ಥಿತಿಯಲ್ಲಿ ಈಗಿನ ಹಿಂದೂಗಳಿದ್ದಾರೆ. ಕ್ರೈಸ್ತರ ವಿಷಯಕ್ಕೆ ಬಂದರೆ ಅವರ ಗ್ರಂಥ ಬೈಬಲ್ ಎಂದು ಅವರು ನಂಬಿದ್ದಾರೆ. ಹಾಗೆ ಅವರ ದೇವರು "ಯೆಹೋವಾ" ಎಂದು ಹೇಳುತ್ತಿದ್ದಾರೆ.

ಇಂದೂಮತ ಯಾವಾಗ ಹುಟ್ಟಿದೆಯೋ ಯಾರಿಗೂ ತಿಳಿದಿಲ್ಲ. ಕ್ರೈಸ್ತ ಮತ ಎರಡುಸಾವಿರ (2000) ವರ್ಷಗಳ ಪೂರ್ವದಲ್ಲಿ ಹುಟ್ಟಿದೆ. ಆದರೂ ಮೊದಲು ಹುಟ್ಟಿದ ಹಿಂದೂಮತಕ್ಕಿಂತ ಹಿಂದೆ ಹುಟ್ಟಿದ ಕ್ರೈಸ್ತಮತ ಬಹಳ ವೇಗವಾಗಿ ಅಭಿವೃದ್ಧಿಯಾಗಿ ಈದಿನ ಹಿಂದೂಮತಕ್ಕಿಂತ ದೊಡ್ಡದಾಗಿ ಇರುವುದಲ್ಲದೆ, ಪ್ರಪಂಚದಲ್ಲಿಯೇ ದೊಡ್ಡ ಮತವಾಗಿ ಇದೆ. ಈ ದಿನ ಹಿಂದೂಮತದಲ್ಲಿನ ಮನುಷ್ಯರಿಗೆ ಜ್ಞಾನ ತಿಳಿಯದೆ ಹೋಗಿರುವುದರಿಂದ ಹಿಂದೂಮತ ಕ್ಷಣಿಸುತ್ತಿದೆ. ಕ್ರೈಸ್ತರು ಬೈಬಲ್ ಬೋಧನೆಗಳನ್ನು ಪ್ರಚಾರ ಮಾಡುತ್ತಾ ಅವರ ಮತವನ್ನು ಅಭಿವೃದ್ಧಿ ಮಾಡಿಕೊಳ್ಳುತ್ತಿದ್ದಾರೆ. ಅವರ ದೃಷ್ಟಿ ಮತವನ್ನು ಅಭಿವೃದ್ಧಿ ಮಾಡುವುದರಲ್ಲಿ ಹೆಚ್ಚಾಗಿದೆಯಾಗಲಿ, ಬೈಬಲ್ ಜ್ಞಾನವನ್ನು ತಿಳಿದುಕೊಳ್ಳುವುದರಲ್ಲಿ ಇಲ್ಲವೆಂದೇ ಹೇಳಬಹುದು. ಭಗವದ್ಗೀತೆಯಲ್ಲಿ ಎಷ್ಟೋ ಜ್ಞಾನವಿದ್ದರೂ ಹಿಂದೂಗಳ ದೃಷ್ಟಿ ಜ್ಞಾನದ ಮೇಲೆ ಇಲ್ಲ. ಯಾರಿಗಾದರೂ ಸ್ವಲ್ಪ ದೇವರ ಮೇಲೆ ಧ್ಯಾಸ ಬಂದರೆ ಆ ಧ್ಯಾಸವು ನಿಜವಾದ ಜ್ಞಾನದ ಮೇಲೆ ಉಪಯೋಗಿಸದೆ ಹೋಗಿರುವುದರಿಂದ ಯಾರು ದೇವರೋ ತಿಳಿಯದೆ ಕೆಲವರು ರಾಮನೇ ದೇವರೆಂದು ನಂಬುತ್ತಿದ್ದಾರೆ. ಕೆಲವರು ವೇದಗಳೇ ತಮ್ಮ ಗ್ರಂಥಗಳೆಂದು ನಂಬುತ್ತಿದ್ದಾರೆ. ಕೊನೆಗೆ ಹಿಂದೂಗಳ ದೃಷ್ಟಿ ದೇವರ ಮೇಲೆ ಅಲ್ಲದೆ ಎಷ್ಟೋ ಜನ ದೇವತೆಗಳ ಮೇಲೆ ಇದೆ.

ದೇವರು ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟು ವಿಶ್ವವ್ಯಾಪ್ತವಾಗಿ ಕದಲುವ ಪ್ರಪಂಚವನ್ನು ತಯಾರು ಮಾಡಿದ್ದಾನೆ. ತಾನು ಕದಲದವನಾದರೂ, ಕೆಲಸಮಾಡದವನಾದರೂ ತನ್ನಲ್ಲಿನ ಒಂದು ಭಾಗವನ್ನು ಕದಲುವಂತೆ,

ಕೆಲಸಮಾಡುವಂತೆ ಮಾಡಿ ತಾನು ಕದಲದಹಾಗೆ ಇರುತ್ತಾ ತನ್ನ ಧರ್ಮವನ್ನು ತಪ್ಪಿಹೋಗದವನಾಗಿ, ಒಂದುಕಡೆ ತಾನೇ ಎಲ್ಲಾ ಮಾಡುವಂತೆ ತನ್ನ ಆತ್ಮವನ್ನು ನಿರ್ಮಿಸಿದ್ದಾನೆ. ತಾನು ಕರ್ತನಾಗಿದ್ದು ಕ್ರಿಯೆಯಾಗಿ ತನ್ನ ಆತ್ಮವನ್ನು ಇಟ್ಟಿದ್ದಾನೆ. ಕರ್ಮವಾಗಿ ಸಹ ತನ್ನಲ್ಲಿನ ಜೀವಾತ್ಮಯೆಂಬ ಭಾಗವನ್ನು ನಿರ್ಮಿಸಿ ಕರ್ಮ ಅನುಭವಿಸುವವನನ್ನಾಗಿ ಮಾಡಿದ್ದಾನೆ. ದೇವರು ದೇವರಾಗಿಯೆ ಇದ್ದು ಕರ್ತ, ಕರ್ಮ, ಕ್ರಿಯೆಯಾಗಿ ತಾನೇ ಇದ್ದಾನೆ. ದೇವರು ಕರ್ಮ, ಕರ್ತ, ಕ್ರಿಯೆಯಾಗಿ ಇದ್ದಾನೆಂದು ಯಾರಿಗೂ ತಿಳಿಯದಂತೆ ಹೋಗಿದೆ. **ದೇವರೊಂದರ ಮೂರು ಭಾಗಗಳನ್ನು ಪೂರ್ತಿಯಾಗಿ ತಿಳಿಯಲ್ಪಟ್ಟರೆ ಅವನು ಸಂಪೂರ್ಣ ಜ್ಞಾನಿಯಾಗುತ್ತಾನೆ**. ತನ್ನ ಮೂರು ಸ್ಥಾನಗಳನ್ನು, ತನ್ನ ಮೂರು ಆತ್ಮಗಳ ವಿಧಾನವನ್ನು ಮನುಷ್ಯ ತಿಳಿಯುವುದೇ ಆಧ್ಯಾತ್ಮಿಕವಾಗುತ್ತದೆ. ದೇವರು ತನ್ನ ವಿಷಯವನ್ನು ತಾನೇ ತಿಳಿದಿರುವನು. ದೇವರ ವಿಷಯ ಯಾವ ಮನುಷ್ಯನಿಗು ತಿಳಿದಿಲ್ಲ. ಅಂತಹ ಸ್ಥಿತಿಯಲ್ಲಿ ಮನುಷ್ಯನಿಗೆ ಆಧ್ಯಾತ್ಮಿಕ **(ದೇವರ ಮೂರು ಭಾಗಗಳ ವಿಷಯ ಜ್ಞಾನ)** ತಿಳಿಯಬೇಕೆಂದರೆ ಅದನ್ನು ದೇವರೇ ಹೇಳಬೇಕಾಗಿರುತ್ತದೆ. ಮೊದಲಿಗೆ ದೇವರ ವಿಷಯ ಮನುಷ್ಯನಿಗೆ ತಿಳಿದಿಲ್ಲ. ದೇವರೇ ತನ್ನ ವಿಷಯವನ್ನು ತಿಳಿಸಿದರೂ, ತಿಳಿದುಕೊಳ್ಳುವ ಯೋಗ್ಯತೆ, ಶಕ್ತಿ ಸ್ವಲ್ಪವೂ ಮನುಷ್ಯನಿಗೆ ಇಲ್ಲ. ಆದ್ದರಿಂದ ದೇವರು ತನಗೆ ಇಷ್ಟವಾದ ಮನುಷ್ಯನಿಗೆ ತನ್ನನ್ನು ತಿಳಿಯುವ ಯೋಗ್ಯತೆಯನ್ನು ಉಂಟುಮಾಡುತ್ತಿದ್ದಾನೆ. ಮನುಷ್ಯ ಸ್ವತಃವಾಗಿ ತಿಳಿಯದಿರುವುದನ್ನು ದೇವರೇ ತಿಳಿಯುವಂತೆ ಮನುಷ್ಯನಿಗೆ ಯೋಗ್ಯತೆಯನ್ನು ಕೊಡುತ್ತಿದ್ದಾನೆ.

ದೇವರು ತನ್ನ ಮೂರು ಆತ್ಮಗಳ ವಿಷಯವನ್ನು ತಿಳಿಸುವುದಕ್ಕೆ ಮೂರು ಗ್ರಂಥಗಳನ್ನು ತಯಾರು ಮಾಡಿಸಿದ್ದಾನೆ. ಆ ಮೂರು ಗ್ರಂಥಗಳೇ ಪ್ರಥಮ ದೈವಗ್ರಂಥ ಭಗವದ್ಗೀತೆ, ದ್ವಿತೀಯ ದೈವಗ್ರಂಥ ಸುವಾರ್ತೆ ಬೈಬಲ್, ಅಂತಿಮ ದೈವಗ್ರಂಥ ಖುರ್‌ಆನ್ ಗ್ರಂಥವೆಂದು ತಿಳಿದುಹೋಗಿದೆ. ದೇವರು ಕರ್ತ, ಕರ್ಮ, ಕ್ರಿಯೆ ಮೂರು ತಾನಾಗಿರುವಾಗ ಮನುಷ್ಯನಿಗೆ ತಿಳಿಸಬೇಕೆಂದುಕೊಂಡ

ವನು ದೇವರೆ, ಮನುಷ್ಯನಿಗೆ ತಿಳಿಸಿದವನೂ ದೇವರೆ, ತಿಳಿದುಕೊಂಡ ಮನುಷ್ಯನು ದೇವರೆ. ಆದರೆ ಈ ಮಾತು ಕೆಲವರಿಗೆ ವಿಚಿತ್ರವಾಗಿದ್ದರೂ ದೇವರೇ ಜೀವಾತ್ಮ, ಆತ್ಮವಾಗಿ, ಪರಮಾತ್ಮನಾಗಿ ಇರುವಾಗ ತಿಳಿದುಕೊಂಡ ಜೀವಾತ್ಮ ಸಹ ಆತನೆ ತಾನೆ! ಹಾಗೆಯೇ ತಿಳಿಸಿದ ಆತ್ಮ ಸಹ ಆತನೇ, ತಿಳಿಸಬೇಕೆಂದುಕೊಂಡ ಪರಮಾತ್ಮ ಸಹ ಆತನೇ. ದೇವರು ಮೂವರು ಪುರುಷರಾಗಿ ಇದ್ದೂ ಯಾರ ಪಾತ್ರ ಅವರು ಪೋಷಿಸುವಂತೆ ನಿರ್ಣಯಿಸಿದ್ದಾನೆ. ಈ ವಿಧವಾಗಿರುವ ದೇವರ ವಿಧಾನ ದೇವರ ಅನುಗ್ರಹ ಹೊಂದಿದವರಿಗೆ ಸುಲಭವಾಗಿ ತಿಳಿದುಬರುವುದು. ದೇವರ ಅನುಗ್ರಹ ಇಲ್ಲದವರಿಗೆ ತಿಳಿಯುವುದು ಬಹಳ ಕಷ್ಟವಾಗುತ್ತದೆ. ಆದ್ದರಿಂದ ಮನುಷ್ಯ ದೇವರ ಮೇಲೆ, ದೇವರ ಜ್ಞಾನದ ಮೇಲೆ ಶ್ರದ್ಧೆ ಹೊಂದಿದ್ದರೆ, ಆತನಿಗಿರುವ ಶ್ರದ್ಧೆಯನ್ನನುಸರಿಸಿ ದೇವರು ತನ್ನ ಜ್ಞಾನವನ್ನು ಅರ್ಥವಾಗುವಂತೆ ಮಾಡುತ್ತಾನೆ. ದೇವರು ಮಾಡುತ್ತಾನೆ ಎಂದು ಹೇಳಿದರೂ ದೇವರು ಏನು ಮಾಡುವುದಿಲ್ಲ, ದೇವರ ಪಾಲನೆಯಲ್ಲಿರುವವರೇ ದೇವರ ಇಷ್ಟವನ್ನನುಸರಿಸಿ ಮಾಡುತ್ತಿರುತ್ತಾರೆ. ದೇವರ ಜ್ಞಾನ ಅರ್ಥವಾಗುವುದಕ್ಕಾಗಲಿ, ಅರ್ಥ ವಾಗದಿರುವುದಕ್ಕಾಗಲಿ ಮನುಷ್ಯನಲ್ಲಿನ ಮಾಯೆಯನ್ನು ಅನುಸರಿಸಿ ಇರುತ್ತದೆ. ಮನುಷ್ಯನಲ್ಲಿನ ಮಾಯೆಯನ್ನು ಬಳಸಿಕೊಂಡು ಮಾಯೆಯಿಂದ ಜ್ಞಾನಕ್ಕೆ ದೂರ ಮಾಡುವವನು ಅಥವಾ ಮಾಯೆಯಿಂದಲೇ ದೇವರ ಜ್ಞಾನಕ್ಕೆ ಹತ್ತಿರ ಮಾಡುವವನು ಅವರಲ್ಲಿನ ಆತ್ಮವೇಯೆಂದು ಯಾರಿಗೂ ತಿಳಿದಿಲ್ಲ.

ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಕ್ರಿಯೆ ಆತ್ಮವೇ ಆಗಿ ಕೆಲಸಗಳನ್ನು ಮಾಡಿಸುತ್ತಿರುವಾಗ ಅಥವಾ ಮಾಡುತ್ತಿರುವಾಗ ಎಲ್ಲಾ ಸಂದರ್ಭಗಳಲ್ಲಿ ಎಲ್ಲಾ ಕೆಲಸಗಳನ್ನೂ ಆತ್ಮವೇ ಮಾಡುತ್ತಿದೆಯೆಂದು ನೀವು ಹೇಳದೆ, ಎಲ್ಲಾ ದೇವರೇ ಮಾಡುತ್ತಿದ್ದಾನೆಂದು ಹೇಳುತ್ತಿದ್ದಾರೆ. ಗ್ರಂಥದಲ್ಲಿ ದೇವರು ಈ ವಿಧವಾಗಿ ಹೇಳಿದ್ದಾನೆ ಎಂದು ನೀವೇ ಹೇಳುತ್ತಿದ್ದೀರ. ಏನು ಮಾಡಿದರೂ ದೇವರೇ ಮಾಡುತ್ತಾನೆ ಎಂದು ನೀವೇ ಹೇಳುತ್ತಿದ್ದೀರ. ದೇವರು ಏನೂ ಮಾಡದವನು ಎಂದು ನೀವೇ ಹೇಳಿ ನಂತರ ಎಲ್ಲಾ ಸಂದರ್ಭಗಳಲ್ಲಿ

ಎಲ್ಲಾ ದೇವರೆ ಮಾಡಿದಂತೆ ಏಕೆ ಹೇಳುತ್ತಿದ್ದಾರೆ? ಹಾಗೆ ಹೇಳುವುದರಿಂದ ಅಲ್ಲಿವೊಂದು ಮಾತು, ಇಲ್ಲಿವೊಂದು ಮಾತು ಹೇಳಿದಂತಾಗುತ್ತದೆ ಅಲ್ಲವೆ! ಇದಕ್ಕೆ ನೀವೇನು ಹೇಳುತ್ತೀರಾ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ. ದೇವರು ಏನು ಮಾಡದಿರುವಮಾತು ನಿಜವೇ. ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನು. ಕ್ರಿಯೆಗಳಿಲ್ಲದವನು ಎಂದರೆ ಯಾವ ಕೆಲಸಗಳೂ ಮಾಡದವನೆಂದು ಅರ್ಥ. ಕೆಲಸಗಳು ಮಾಡುವವನು ಆತ್ಮವೇ ಎಂದು ಹೇಳುತ್ತಿದ್ದೇವೆ. ಪ್ರಪಂಚದಲ್ಲಿನ ಸರ್ವ ಕಾರ್ಯಗಳನ್ನು ಮಾಡುವವನು ಆತ್ಮವೇ ಎಂದು ನನಗೆ ಚೆನ್ನಾಗಿ ತಿಳಿದಿದೆ. ಆತ್ಮ ಇಂತಹದೆಂದು ಯಾರಿಗೂ ತಿಳಿಯದ ಆತ್ಮ ವಿಧಾನವನ್ನು ನಾವು ಮೊದಲಬಾರಿಗೆ ಹೇಳುತ್ತಿದ್ದೇವೆ. ಅದರೂ ಮಾತುಗಳ ಸಂದರ್ಭದಲ್ಲಿ ದೇವರು ಹೀಗೆ ಹೇಳಿದ್ದಾನೆಂದು, ದೇವರು ಹಾಗೆ ಮಾಡಿದ್ದಾನೆಂದು ಹೇಳುತ್ತಿರುತ್ತಾರೆ. ವಾಸ್ತವವಾಗಿ ದೇವರು ಏನು ಮಾಡುವುದಿಲ್ಲವೆಂದು ತಿಳಿದರೂ ಮಾತುಗಳ ಸಂದರ್ಭದಲ್ಲಿ ದೇವರು ಹೇಳಿದ್ದಾನೆ, ಮಾಡಿದ್ದಾನೆ ಎಂದು ಹೇಳುವುದಕ್ಕೆ ಕಾರಣ ಇದೆ. ದೇವರು ಎಲ್ಲದಕ್ಕು ಕರ್ತನಾದರೂ ದೇವರ ಗೌರವಾರ್ಥ ದೇವರು ಮಾಡದ ಕೆಲಸವನ್ನು ಸಹಾ ದೇವರೆ ಮಾಡಿದ್ದಾನೆಂದು ಹೇಳಬೇಕು. ಹಾಗೆ ಹೇಳದೆಹೋದರೆ ದೇವರನ್ನು ಮರೆತುಹೋದಂತಾಗುತ್ತದೆ. ದೇವರನ್ನು ಗೌರವಿಸದಂತಾಗುತ್ತದೆ. ಎಲ್ಲದಕ್ಕು ದೇವರು ಮೂಲಪುರುಷನು ಆದ್ದರಿಂದ ಆತ್ಮ ಮಾಡುವ ಎಲ್ಲಾ ಕೆಲಸಗಳನ್ನೂ ಸಂದರ್ಭಾನುಸಾರ ದೇವರು ಮಾಡಿದ್ದಾನೆಂದು ಹೇಳಬೇಕಾಗಿದೆ. ದೇವರು ಮಳೆ ಸುರಿಸುತ್ತಾನೆ ಎಂದೂ, ದೇವರು ಕೆಲವುಕಡೆ ಮಳೆ ಇಲ್ಲದ ಹಾಗೆ ಮಾಡಿ ಪೈರುಗಳು ಒಣಗಿ ಹೋಗುವಂತೆ ಮಾಡುತ್ತಾನೆ ಎಂದು ಸಹ ಹೇಳುತ್ತಿರುತ್ತೇವೆ. ವಾಸ್ತವಕ್ಕೆ ಆ ಕೆಲಸಗಳನ್ನು ಆತ್ಮವೇ ಮಾಡುತ್ತಿದೆಯಾಗಲಿ ಎಷ್ಟು ತಿಳಿದವನಾದರೂ ದೇವರನ್ನು ಗೌರವಿಸಿದಂತೆ ಆ ಕೆಲಸಗಳನ್ನು ದೇವರೇ ಮಾಡಿದ್ದಾನೆಂದು ಹೇಳಬೇಕು. ಹಾಗೆ ಹೇಳುವುದರಲ್ಲಿ ತಪ್ಪಿಲ್ಲ.

ದೇವರು ಸೃಷ್ಠಿ ಆದಿಯಲ್ಲಿ ತನ್ನ ಜ್ಞಾನವನ್ನು ಸೂರ್ಯನಿಗೆ ಹೇಳಿದ್ದಾನೆಂದು ನಾವು ಇತರರಿಗೆ ಹೇಳುತ್ತಿದ್ದೇವೆ. ದೇವರು ಮಾತನಾಡದವನು

ಆದಾಗ ದೇವರು ಸೂರ್ಯನಿಗೆ ಜ್ಞಾನವನ್ನು ಹೇಗೆ ಹೇಳಿದ್ದಾನೆಂದು ಪ್ರಶ್ನೆ ಕೇಳುವುದು ತಪ್ಪೋಲ್ಲ ನಿಜಕ್ಕೆ **"ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ"** ಎಂಬ ಸೂತ್ರದ ಪ್ರಕಾರ ಸೂರ್ಯನಿಗೆ ದೇವರು ಹೇಳಲಿಲ್ಲ. ಆದರೂ ಆತನ ಗೌರವಾರ್ಥಕ್ಕೆ ಹಾಗೆ ಹೇಳುತ್ತಿದ್ದೇವೆ. ದೇವರು ಹೇಳದಿದ್ದರೂ ಆತನ ಪಾಲನೆಯಲ್ಲಿ ಮೊದಲನೆಯವನಾದ ಆತ್ಮವೇ ಆಕಾಶ ವೊಂದರ ಶಬ್ಧದಿಂದ ಜ್ಞಾನವನ್ನು ಹೇಳಿದೆ. ಆಕಾಶ ಪಂಚ ಭೂತಗಳಲ್ಲಿ ಒಂದು ಭೂತ. ಆಕಾಶವೆಂಬ ಮಹಾಭೂತದಲ್ಲಿ ಕೂಟಸ್ಥನಾಗಿ ಆತ್ಮ ಇದೆ. ಆಕಾಶವೊಂದರ ಆತ್ಮವೇ ಸೂರ್ಯನಿಗೆ ಜ್ಞಾನವನ್ನು ಹೇಳುವುದು ನಡೆದಿದೆ. ಕೆಲಸ ಮಾಡುವವನು ಆತ್ಮವೇ ಆದಾಗ, ಆಗ ಜ್ಞಾನವನ್ನು ಹೇಳಿದವನು ಸಹ ಆತ್ಮವೇಯೆಂದು ತಿಳಿದಿದೆ. ಆದರೂ ಅಲ್ಲಿ 'ದೇವರು ಜ್ಞಾನವನ್ನು ಸೂರ್ಯನಿಗೆ ಹೇಳಿದ್ದಾನೆ' ಎಂದು ಹೇಳಿದ್ದೇವೆ. ದೇವರು ಮಾಡಲಿಲ್ಲವೆಂದು, ಆತ್ಮವೇ ಮಾಡಿದೆಯೆಂದು ತಿಳಿದರೂ ಹೇಳುವಾಗ ದೇವರೆ ಮಾಡಿದ್ದಾನೆಂದು ಹೇಳಬೇಕು. ದೇವರ ವಿಷಯದಲ್ಲಿಯೇ ಅಲ್ಲದೆ ಪ್ರಪಂಚ ವಿಷಯಗಳಲ್ಲಿ ಸಹ ಕೆಲವುಕಡೆ ಮಾಡಿರುವುದು ಒಬ್ಬರಾದರೆ, ಮಾಡಿದವರನ್ನು ಕುರಿತು ಹೇಳದೆ ಮಾಡಿಸಿದವನ ಹೆಸರೇ ಹೇಳುತ್ತಾರೆ. ಒಂದು ಪಟ್ಟಣದಲ್ಲಿ ಒಂದು ಅಂದವಾದ ಸಿನಿಮಾಹಾಲ್ ಇದೆಯೆಂದುಕೊಳ್ಳೋಣ. ಅಲ್ಲಿಗೆ ಹೋದ ವ್ಯಕ್ತಿ ಈ ಸಿನಿಮಾಹಾಲ್ ಯಾರು ಕಟ್ಟಿದ್ದಾರೆ? ಎಂದು ಕೇಳಿದ್ದಾನೆಂದುಕೊಳ್ಳಿ. ಆಗ ಇಂತಹ ವ್ಯಕ್ತಿ ಕಟ್ಟಿದ್ದಾನೆಂದು ಅದರ ಓನರ್ (ಯಜಮಾನನ) ಹೆಸರು ಹೇಳುತ್ತಿದ್ದಾರೆ. ಸೂರ್ಯಪ್ರಕಾಶ್ ಎನ್ನುವಾತನದು ಆ ಸಿನಿಮಾಹಾಲ್ ಆದಾಗ ಸೂರ್ಯಪ್ರಕಾಶ್ ಆ ಹಾಲ್‌ನ್ನು ಕಟ್ಟಿದ್ದಾನೆ ಎಂದು ಹೇಳುತ್ತಾರೆ. ಆದರೆ ಸೂರ್ಯಪ್ರಕಾಶ್ ಯಾವತ್ತೂ ಅದನ್ನು ಕಟ್ಟಲಿಲ್ಲ. ಸೂರ್ಯಪ್ರಕಾಶ್ ಪಕ್ಕದಲ್ಲಿದ್ದು ಹಣಕೊಟ್ಟು ಹಾಲ್‌ನನ್ನು ಕಟ್ಟಿರೆಂದು ಒಬ್ಬ ಇಂಜಿನೀರ್‌ಗೆ ಒಪ್ಪಿಸಿದರೆ, ಆ ಇಂಜಿನೀಯರ್ ಕೆಲಸದವರ ಕೈಯಿಂದ ಕಟ್ಟಿಸಿದ್ದಾನೆ. ಕಟ್ಟಿಸುವ ಜವಬ್ದಾರಿ ಇಂಜನೀರ್‌ದಾಗಿದ್ದು, ಕಟ್ಟಿದವರು ಬಿಲ್ಡಿಂಗ್ ಕಟ್ಟುವ ಮೇಸ್ತ್ರೀಗಳದು. ಸೂರ್ಯಪ್ರಕಾಶ್ ಯಜಮಾನ ಮಾತ್ರವೆ ಆತನು ಕಟ್ಟಲು ಆದೇಶಕೊಟ್ಟಾಗ ಉಳಿದ ನಿರ್ಮಾಣ ವ್ಯಕ್ತಿಗಳು ಅದನ್ನು ನಿರ್ಮಿಸಿದ್ದಾರೆ.

ಸೂರ್ಯಪ್ರಕಾಶ್ ಸಾಕ್ಷಿಯಾಗಿ ಆಗಾಗ ಆ ಹಾಲ್‌ನನ್ನು ನೋಡುವವನು, ಅಷ್ಟೇ ಆದರೆ, ಯಾವತ್ತೂ ಸ್ವಲ್ಪವೂ ಸಹ ನಿರ್ಮಾಣ ಕೆಲಸವನ್ನು ಮಾಡಲಿಲ್ಲ. ಆದರೂ ಕೇಳುವ ವ್ಯಕ್ತಿ ಈ ಹಾಲ್ ಬಹಳ ಅಂದವಾಗಿದೆ ಯಾರು ಕಟ್ಟಿದ್ದಾರೆ? ಎಂದು ಕೇಳಿದರೆ, ಇಂತಹ ಸೂರ್ಯಪ್ರಕಾಶ್ ಕಟ್ಟಿದ್ದಾನೆಂದು ಮನುಷ್ಯರ ವಿಷಯದಲ್ಲಿ ಹೇಳಿದಾಗ, ಸರ್ವಕ್ಕು ಯಜಮಾನನಾದ ದೇವರನ್ನು ಆತನೆ ಮಾಡಿದ್ದಾನೆ ಎಂದು ಹೇಳುವುದರಲ್ಲಿ ತಪ್ಪಿಲ್ಲ. ಕೂಲಿಗಳು ಮಾಡಿದ ಕೆಲಸವನ್ನು ಯಜಮಾನ ಮಾಡದಿದ್ದರೂ, ಯಜಮಾನನ ಹೆಸರೇ ಹೇಳಿದಂತೆ ದೇವರ ವಿಷಯದಲ್ಲಿ ದೇವರು ಮಾಡದಿದ್ದರೂ, ದೇವರ ಹೆಸರು ಗೌರವಾರ್ಥವಾಗಿಯೇ ಹೇಳುತ್ತಿದ್ದೇವೆ. ಕೆಲವು ಕಡೆ ಯಜಮಾನನು ಸಹ ನಾನೇ ಕಟ್ಟಿದ್ದೇನೆಂದು ಹೇಳಿದರೂ, ಅದು ನಾನು ಯಜಮಾನನೆಂದು ಹೇಳುವ ಭಾವವೆಯಾಗಲಿ ಹೆಸರು ಅಲ್ಲವೆಂದು ತಿಳಿಯಬೇಕು.

ಶ್ರೀಕೃಷ್ಣನು ಅರ್ಜುನನಿಗೆ ಭಗವದ್ಗೀತೆಯನ್ನು ಹೇಳಿದಾಗ ಒಂದುಮಾತು ಹೇಳಿದ್ದಾನೆ ಅದು ಏನೆಂದರೆ! ಅರ್ಜುನಾ! ಮೊದಲು ಸೂರ್ಯನಿಗೆ ಈ ಜ್ಞಾನವನ್ನು ಹೇಳಿದ್ದೇನೆ, ನಂತರ ಈಗ ನೀನು ನನಗೆ ಇಷ್ಟವಾದವನು ಆದ್ದರಿಂದ ನಿನಗೆ ನಾನು ಹೇಳುತ್ತಿದ್ದೇನೆ ಎಂದಿದ್ದಾನೆ. ಇದರಲ್ಲಿ ಯಾರಿಗೂ ಯಾವ ತಪ್ಪು ಕಾಣಿಸುವುದಿಲ್ಲ. ಆದರೆ ಒಂದು ದೈವಗ್ರಂಥದಲ್ಲಿ "ದೇವರು ಪ್ರತ್ಯಕ್ಷವಾಗಿ ಯಾರೊಂದಿಗೂ ಮಾತನಾಡುವುದಿಲ್ಲ" ಎಂದು ಇದೆ. ಅದರಪ್ರಕಾರ ನೋಡಿದರೆ ಕೃಷ್ಣನು ಹೇಳಿರುವುದು ತಪ್ಪಾಗುತ್ತದೆ. ಏಕೆಂದರೆ ಕೃಷ್ಣನು ತನ್ನನ್ನು ದೇವರಾಗಿ ಭಗವದ್ಗೀತೆಯಲ್ಲಿ ಪ್ರಕಟಿಸಿಕೊಂಡಿದ್ದಾನೆ. ಅದೇ ಭಗವದ್ಗೀತೆಯಲ್ಲಿಯೇ ದೇವರನ್ನು ಯಾರೂ ನೋಡಲಾರರು ಎಂದು ಸಹ ಹೇಳಿದ್ದಾನೆ. ಆದರೂ ನಾನು ಸೂರ್ಯನಿಗೆ ಹೇಳಿದ ಅದೇ ಜ್ಞಾನವನ್ನೇ ನಿನಗೆ ಹೇಳುತ್ತಿದ್ದೇನೆ ಎಂದಿದ್ದಾನೆ. ಆದರೆ ಇಲ್ಲಿ ನಾವು ಅರ್ಥ ಮಾಡಿಕೊಳ್ಳುವುದರಲ್ಲಿ ಎಷ್ಟೋ ತಿಳುವಳಿಕೆಯನ್ನು ಉಪಯೋಗಿಸಬೇಕು. ಹಾಗೆ ಆಗದಿದ್ದರೆ ಸೂರ್ಯಪ್ರಕಾಶ್ ಬಿಲ್ಡಿಂಗ್ ಕಟ್ಟಿದ್ದೇನೆಂಬುದು ತಪ್ಪೆ. ಕೃಷ್ಣನು ನಾನು ಜ್ಞಾನವನ್ನು ಹೇಳಿದ್ದೇನೆನ್ನುವುದು

ತಪ್ಪೇಯಾಗುತ್ತದೆ. ಹೀಗೆ ಜ್ಞಾನ ವಿಷಯಗಳಲ್ಲಿ ಅನೇಕ ಕಡೆ ಯೋಚಿಸಿ ತಿಳಿದುಕೊಳ್ಳಬೇಕಾಗಿರುವುದು ಎಷ್ಟೋ ಇದೆ. ಆಧ್ಯಾತ್ಮಿಕ ವಿಷಯದಲ್ಲಿ ಸ್ಥೂಲ ಭಾವನೆಯ ಹತ್ತಿರ ಸ್ಥೂಲವಾಗಿಯೇ ತಿಳಿಯಬೇಕು. ಹಾಗೆ ಸೂಕ್ಷ್ಮ ಭಾವನೆಯ ಹತ್ತಿರ ಸೂಕ್ಷ್ಮವಾಗಿಯೆ ತಿಳಿಯಬೇಕು. ಹಾಗಲ್ಲದೆ ಸ್ಥೂಲ, ಸೂಕ್ಷ್ಮಗಳ ಹತ್ತಿರ ಅನರ್ಥಮಾಡಿಕೊಂಡರೇ ಜ್ಞಾನ ಎಂದಿಗೂ ಅರ್ಥವಾಗುವುದಿಲ್ಲ. ದೇವರು ಎಂದಿಗೂ ತಿಳಿಯುವುದಿಲ್ಲ.

ಮನುಷ್ಯ ದೇವರ ಜ್ಞಾನವನ್ನು ತಿಳಿಯುವುದಕ್ಕೆ ಹನ್ನೆರಡು ಮತಗಳನ್ನು ಸೃಷ್ಠಿಸಿಕೊಂಡಿದ್ದಾನೆ. ಅದರಲ್ಲಿ ದೇವರೆ ಮುಖ್ಯವೆಂದು ಕೆಲವರೆಂದಿದ್ದಾರೆ. ಕೆಲವರು ನೀತಿಯೇ ಮುಖ್ಯವೆಂದುಕೊಂಡಿದ್ದಾರೆ. ಈ ಹನ್ನೆರಡು ಮತಗಳಲ್ಲಿ ಮೂರು ಮಾತ್ರ ಒಬ್ಬ ದೇವರನ್ನು ಕುರಿತು ಹೇಳಿವೆಯೆಂದು, ಹುಟ್ಟಿವೆಯೆಂದು ಹೇಳಬಹುದು. ನನಗೆ ತಿಳಿದವರೆಗು, ದೇವರು ಹೇಳಿದವರೆಗು ಮೂರು ಮತಗಳು ಸಿದ್ಧಾಂತದಿಂದ ಕೂಡಿಕೊಂಡಿವೆ, ಉಳಿದ ಒಂಭತ್ತು ಮತಗಳು ರಾದ್ಧಾಂತದಿಂದ ಕೂಡಿಕೊಂಡಿವೆ. ಸಿದ್ಧಾಂತದಲ್ಲಿ ಶಾಸ್ತ್ರವಿರುತ್ತದೆ. ಆದ್ದರಿಂದ ಈ ಮೂರು ಮತಗಳಲ್ಲಿ ಯಾವೊಂದು ಮತದಲ್ಲಿದ್ದರೂ ಫರವಾಗಿಲ್ಲ ಮುಕ್ತಿಯನ್ನು ಹೊಂದಬಹುದು. ಆದರೆ ಈದಿನ ಮೂರು ಮತಗಳಲ್ಲಿ ಇರುವವರೆ ತಪ್ಪುದಾರಿ ಹಿಡಿದು ಅಜ್ಞಾನದಕಡೆ ಹೋಗುತ್ತಿದ್ದಾರೆ. ಹಾಗಲ್ಲದೆ ಎಲ್ಲರೂ ಸರಿಯಾದ ಮಾರ್ಗವನ್ನು ಅನುಸರಿಸಿ ಮುಕ್ತಿಯನ್ನು ಸೇರಬೇಕೆಂಬುದೇ ನಮ್ಮ ಉದ್ದೇಶ. ಅಸಲಾದ ದೈವಗ್ರಂಥಗಳಾದ ಈ ಮೂರು ಗ್ರಂಥಗಳಿಗೆ ಸಂಬಂಧಿಸಿದವರೆಲ್ಲರೂ ಅದೃಷ್ಟವಂತರೇ. ನಾನು ಆ ಮೂರು ಗ್ರಂಥಗಳ ಔನ್ನತ್ಯವನ್ನು ತಿಳಿಹೇಳುವುದೇ ನನ್ನ ಕರ್ತವ್ಯ ಎಂದುಕೊಂಡಿದ್ದೇನೆ. ಈಗ ಮನುಷ್ಯಕಡೆಯಿಂದ ಮಾತನಾಡುತ್ತಿಲ್ಲ. ದೇವರಕಡೆಯಿಂದ ಮಾತನಾಡುತ್ತಿದ್ದೇನೆ. ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ಮೂರು ವಿಧಗಳಾಗಿ ತಿಳಿಸುತ್ತೇನೆಂದಿದ್ದಾನೆ. ಹಾಗೆ ಮೂರು ವಿಧಗಳಾಗಿ ತಿಳಿಸಿದ ಜ್ಞಾನವೇ ಮೂರು ಗ್ರಂಥಗಳಾಗಿ ರೂಪ ಹೊಂದಿ, ಆ ಮೂರು ಗ್ರಂಥಗಳು ಮೂರು ಹೆಸರುಗಳಿಂದ ನಮ್ಮಮುಂದಿವೆ. ದೇವರು ಪ್ರಸಾದಿಸಿದ

ಮೂರು ಗ್ರಂಥಗಳನ್ನು ಸಮಾನವಾಗಿ ನೋಡದಂತೆ ಮತವನ್ನು ಮುಖ್ಯವಾಗಿಟ್ಟುಕೊಂಡು ನನ್ನದು ಶ್ರೇಷ್ಠವಾದ ಗ್ರಂಥ. ನಿಮ್ಮದು ಚಿಕ್ಕ ಗ್ರಂಥ ಎಂದರೆ ಅದು ಇತರ ಮತದವರನ್ನು ಅನ್ನುವಂತ್ತಿದ್ದರೂ ನಿಜಕ್ಕೆ ದೇವರನ್ನೇ ನಿಂದಿಸಿದಂತಾಗುತ್ತದೆ. ಏಕೆಂದರೆ! ಮೂರು ಗ್ರಂಥಗಳು ದೇವರ ಮೂರು ವಿಧಾನಗಳಿಂದ ತಯಾರಾಗಿರುವವೇ ಆಗಿರುವುದರಿಂದ, ಮೂರೂ ದೈವಗ್ರಂಥಗಳೆಂದು ಹೇಳಲ್ಪಟ್ಟಿರುವುದರಿಂದ, ಮೂರನ್ನು ಒಬ್ಬ ದೇವರೇ ಕೊಟ್ಟಿರುವವಾಗಿರುವುದರಿಂದ ಒಂದು ಗ್ರಂಥವನ್ನು ಕಡಿಮೆಯಾಗಿ ನೋಡಿದರೂ ಉಳಿದ ಎರಡು ಗ್ರಂಥಗಳನ್ನು ಕಡಿಮೆಯಾಗಿಯೇ ನೋಡಿದಂತಾಗುತ್ತದೆ. ಒಂದು ಗ್ರಂಥವನ್ನು ಹೇಳನವಾಗಿ ನೋಡಿದರೂ, ಕಡಿಮೆ ಭಾವನೆಯಿಂದ ನೋಡಿದರೂ ಅದು ಘೋರ ಪಾಪ ಮಾಡಿದಂತಾಗುತ್ತದೆ. ಆದ್ದರಿಂದ ನಿನ್ನ ಗ್ರಂಥವನ್ನು ನೀನು ಗೌರವಿಸಿದಹಾಗೆ ಇತರ ಗ್ರಂಥಗಳನ್ನು ಗೌರವಿಸದೇ ಹೋದರೂ ಫರವಾಗಿಲ್ಲ ಆದರೆ, ಅಗೌರವಪಡಿಸಬಾರದು, ಕಡಿಮೆಯಾಗಿ ನೋಡಬಾರದೆಂದು ಹೇಳುತ್ತಿದ್ದೇನೆ.

ನಾವು ಏಕೆ ಮೂರು ಗ್ರಂಥಗಳ ವಿಷಯದಲ್ಲಿ ಅಷ್ಟಾಗಿ ಹೇಳುತ್ತಿದ್ದೇವೆಂದರೆ! ದೇವರು ತನ್ನ ವಿಷಯವೆಲ್ಲವನ್ನು ಆ ಮೂರು ಗ್ರಂಥಗಳಲ್ಲಿಯೇ ಇಟ್ಟಿದ್ದಾನೆ. ದೇವರು ಗುಟ್ಟು, ರಟ್ಟು ಎರಡೂ ಆ ಮೂರು ಗ್ರಂಥಗಳಲ್ಲಿಯೇ ಇವೆ. ಮನುಷ್ಯನ ಶರೀರದಲ್ಲಿ ಗುಂಡಿಗೆ, ಲಿವರ್(ಪಿತ್ತಕೋಶ), ಶ್ವಾಸಕೋಶಗಳು ಮೂರು ಎಷ್ಟು ಮುಖ್ಯವೋ, ದೇವರ ಆಧ್ಯಾತ್ಮಿಕ ಸಾಮ್ರಾಜ್ಯದಲ್ಲಿ ಮೂರು ಗ್ರಂಥಗಳು ಅಷ್ಟೇ ಮುಖ್ಯವಾದ ಸಾರಾಂಶ ಇರುವವು. ಮೂರು ಗ್ರಂಥಗಳಲ್ಲಿ ಒಂದೇ ದೇವರ ಜ್ಞಾನ ನಿಕ್ಷಿಪ್ತವಾಗಿದೆ. ಅದರೇ ಮನುಷ್ಯರು ಮೂರು ಗ್ರಂಥಗಳನ್ನು ಓದಲಾರದೆಹೋಗಿರುವುದರಿಂದ, ಯಾರಾದರೂ ಓದಿದರೆ ಒಂದು ಗ್ರಂಥವನ್ನು ಓದುವುದರಿಂದ, ಉಳಿದ ಎರಡು ಗ್ರಂಥಗಳಲ್ಲಿ ಏನಿರುವುದು ತಿಳಿದಿಲ್ಲ. ಹಿಂದೂ ಆದವನು ಎಷ್ಟು ಜ್ಞಾನಿಯಾದರೂ ನಾನು ಹಿಂದೂ ಎಂದು ಮತವನ್ನು ಅಡ್ಡ ಇಟ್ಟುಕೊಳ್ಳುವುದರಿಂದ ಭಗವದ್ಗೀತೆಯನ್ನು ಹೊರತು ಬೈಬಲ್, ಖುರ್‌ಆನ್ ಗ್ರಂಥಗಳನ್ನು ಓದುತ್ತಿಲ್ಲ. ಉಳಿದ ಎರಡು ಗ್ರಂಥಗಳು ಪರಮತಕ್ಕೆ

ಸಂಬಂಧಿಸಿರುವವೆಂದು ಓದುತ್ತಿಲ್ಲ. ಅದರಿಂದ ಉಳಿದ ಎರಡು ಗ್ರಂಥಗಳಲ್ಲಿರುವ ಜ್ಞಾನವೇನೊ ತಿಳಿಯದಹಾಗೆ ಹೋಗಿದೆ. ಹಾಗೆಯೇ ಕ್ರೈಸ್ತರು ತಮ್ಮ ಮತಕ್ಕೆ ಸಂಬಂಧಿಸಿದ ಬೈಬಲ್‌ನನ್ನು ಮಾತ್ರ ಓದಿ ಉಳಿದ ಎರಡು ಗ್ರಂಥಗಳನ್ನು ಮುಟ್ಟದಂತಿದ್ದಾರೆ. ಅದೇ ವಿಧವಾಗಿ ಮುಸ್ಲಿಮ್ ಆದವರು ಸಹ ತಮ್ಮ ಖುರ್‌ಆನ್ ಗ್ರಂಥವನ್ನು ನೋಡಿದಂತೆ ಉಳಿದ ಎರಡು ಗ್ರಂಥಗಳನ್ನು ನೋಡಲಿಲ್ಲ. ಒಂದುವೇಳೆ ನೋಡಿದರೂ ಅದರಲ್ಲಿನ ಜ್ಞಾನವನ್ನು ತೋರಿಸಿ ಅದಕ್ಕಿಂತ ತಮ್ಮ ಗ್ರಂಥದಲ್ಲಿನ ಜ್ಞಾನವೇ ದೊಡ್ಡದಾಗಿದೆಯೆಂದು ಹೇಳುತ್ತಿರುತ್ತಾರೆ. ಉಳಿದ ಗ್ರಂಥಗಳನ್ನು ನೋಡಿದರೂ ಅದರಲ್ಲಿನ ಯಾವುದೇ ವಾಕ್ಯವನ್ನು ದೊಡ್ಡದಾಗಿದೆಯೆಂದು ಅಂದುಕೊಳ್ಳುತ್ತಿಲ್ಲ. ತಮ್ಮ ಗ್ರಂಥಕ್ಕಿಂತ ಕಡಿಮೆ ಭಾವನೆಯಿಂದ ನೋಡುವುದು ನಡೆಯುತ್ತಿದೆ. ಮತ್ತೊಂದು ವಿಷಯದ ಪ್ರಕಾರ ಒಂದು ಮತದವರಿಗೆ ಇನ್ನೊಂದು ಮತದಲ್ಲಿನ ಗ್ರಂಥವನ್ನು ಓದಿದರೆ ಅದು ಅವರಿಗೆ ಅರ್ಥವಾಗುತ್ತಿಲ್ಲ. ಅರ್ಥವಾದರೂ ತಮ್ಮ ಜ್ಞಾನಕ್ಕೆ ವಿರುದ್ಧವಾಗಿದೆ ಎಂಬ ಭಾವನೆ ಇರುತ್ತದೆ. ಈ ವಿಧವಾಗಿ ಒಬ್ಬೊಬ್ಬರಿಗೆ ಒಂದೊಂದು ವಿಧವಾಗಿ ಕಾಣಿಸುವುದರಿಂದ, ಮನುಷ್ಯ ಉಳಿದ ಗ್ರಂಥಗಳಲ್ಲಿನದು ಸಹ ತನ್ನ ಜ್ಞಾನವೇಯೆಂದು ತಿಳಿಯಲಾರದೆ ಹೋಗುತ್ತಿದ್ದಾನೆ.

ದೇವರು ತನ್ನ ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ಒಂದೇ ವಿಧವಾಗಿ ಅಲ್ಲದೆ ಮೂರು ಕೋನಗಳಿಂದ ತೋರಿಸಿದ್ದಾನೆ. ಇಲ್ಲಿ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ತ್ರಿಮೂರ್ತಿಗಳಲ್ಲಿ ವಿಷ್ಣು, ಈಶ್ವರ, ಚತುರ್ಮುಖ ಬ್ರಹ್ಮ ಎಂಬುವವರು ಮೂವರು ಇದ್ದಾರೆ ಅಲ್ಲವೆ! ಅವರಲ್ಲಿನ ನಾಲ್ಕು ತಲೆಗಳ ಬ್ರಹ್ಮಬೊಂಬೆಯನ್ನು ಒಂದು ಮೈದಾನದಲ್ಲಿ ಪ್ರತಿಷ್ಟಿಸಿ, ದಾರಿಯಲ್ಲಿ ಹೋಗುವವರೆಲ್ಲರೂ ಬ್ರಹ್ಮನನ್ನು ನೋಡಿ ಹೋಗುವಹಾಗೆ ಮಾಡಬೇಕೆಂದು ಕೊಂಡ ಒಬ್ಬ ಹಿಂದೂ ಭಕ್ತನು, ಆ ವಿಧವಾಗಿಯೇ ಪ್ರತಿಷ್ಟಿಸಿದನು. ನಾಲ್ಕು ತಲೆಗಳ ಬೊಂಬೆಯನ್ನು ಪ್ರತ್ಯೇಕವಾಗಿ ತಯಾರು ಮಾಡಿದ್ದಾನೆ. ಆ ಪ್ರತ್ಯೇಕತೆ ಪ್ರಕಾರ ಬ್ರಹ್ಮ ಮುಖದ ಮೇಲಿರುವ ತಿಲಕದ ಬೊಟ್ಟು ಸೂರ್ಯರಶ್ಮಿಗೆ

ಹೊಳೆಯುತ್ತಾ ಕಾಣಿಸುತ್ತಿತ್ತು. ಬಿಸಿಲಿಗೆ ಬೊಟ್ಟು ಹೊಳೆಯುವ ಪ್ರತ್ಯೇಕತೆ ಇರುವ ಆ ಪ್ರತಿಮೆಯನ್ನು ಆಕಡೆ ಹೋಗುವವರೆಲ್ಲರೂ ನೋಡುತ್ತಾ ಹೋಗುತ್ತಿದ್ದರು. ಅಶೋಕ್ ಎಂಬುವಾತನು ಬೆಳಿಗ್ಗೆ ಏಳು ಗಂಟೆಗೆ ಪೂರ್ವದಕಡೆಯಿಂದ ಪಶ್ಚಿಮದಕಡೆಗೆ ದಾರಿಯಲ್ಲಿ ಹೋಗುತ್ತಾ ಚತುರ್ಮುಖ ಬ್ರಹ್ಮನನ್ನು ನೋಡಿದ್ದಾನೆ. ಬೊಂಬೆಗೆ ನಾಲ್ಕುಕಡೆಯಲ್ಲಿಯೂ ತಲೆ ಇರುವುದರಿಂದ. ಬೆಳಿಗ್ಗೆ ಪೂರ್ವದಕಡೆಯಿಂದ ಸೂರ್ಯಕಿರಣಗಳು ಬೊಂಬೆ ಮುಖಕ್ಕೆ ಎದುರಾಗಿ ಬೀಳುವುದರಿಂದ, ಆ ಮುಖದ ಮೇಲಿನಬೊಟ್ಟು ಥಳಥಳ ಹೊಳೆಯುತ್ತಾ ಕಾಣಿಸಿತು. ಬ್ರಹ್ಮ ಮುಖದ ಮೇಲೆ ಬೊಟ್ಟಿನೊಂದರ ಹೊಳಪನ್ನು ದಾರಿಯಲ್ಲಿ ಹೋಗುವ ಅಶೋಕ್ ನೋಡಿದ್ದಾನೆ. ಅಶೋಕ್ ಹೋದ ಹತ್ತು ನಿಮಿಷಗಳಿಗೆ ತರುಣ್ ಎಂಬ ವ್ಯಕ್ತಿ ಪಶ್ಚಿಮಕಡೆಯಿಂದ ಪೂರ್ವದಕಡೆ ಹೋಗುತ್ತಾ ಬ್ರಹ್ಮಮುಖವನ್ನು ನೋಡುತ್ತಾಹೋಗಿದ್ದಾನೆ. ಪಶ್ಚಿಮಕಡೆಯಿಂದ ಬಂದವನಿಗೆ ಆ ಸಮಯದಲ್ಲಿ ಪಶ್ಚಿಮಕಡೆಯಿಂದ ಬಿಸಿಲು (ಸೂರ್ಯ ಕಿರಣಗಳು) ಇಲ್ಲದಿರುವುದರಿಂದ ಬ್ರಹ್ಮಮುಖದ ಮೇಲೆ ಬೊಟ್ಟು ಹೊಳೆಯುತ್ತಾ ಕಾಣಿಸದೆ ಸಾಧಾರಣವಾಗಿ ಕಾಣಿಸಿತು. ನಂತರ ಅಶೋಕ್ ಆಗಲಿ, ತರುಣ್ ಆಗಲಿ ಎಂದಿಗೂ ಆ ಕಡೆಗೆ ಬರಲಿಲ್ಲ. ಅವರಿಬ್ಬರೂ ಬಂದು ಹೋದ ಮೂರು ತಿಂಗಳ ನಂತರ ಮೊದಲು ಬಂದ ಅಶೋಕ್‌ನ ತಂದೆ ಬ್ರಹ್ಮ ಬೊಂಬೆ ಇರುವ ದಾರಿಯಲ್ಲಿಯೇ ಬಂದಿದ್ದಾನೆ. ಆತನು ಬಂದಾಗ ಸರಿಯಾಗಿ ಹಗಲು ಹನ್ನೆರಡು ಗಂಟೆಗಳ ಸಮಯವಾದ್ದರಿಂದ, ಬಿಸಿಲು ತಲೆಮೇಲಿನ ಭಾಗದಲ್ಲಿ ಇರುವುದರಿಂದ, ಸೂರ್ಯಕಿರಣಗಳು ಬೊಂಬೆ ಬೊಟ್ಟಿನಮೇಲೆ ಬೀಳುವ ಅವಕಾಶ ಇಲ್ಲದಿರುವುದರಿಂದ, ಬೊಟ್ಟಿನ ಹೊಳಪು ಸ್ವಲ್ಪವೂ ಆತನಿಗೆ ಕಾಣಿಸಲಿಲ್ಲ. ಆತನು ಸಾಧಾರಣವಾಗಿ ಬೊಂಬೆಯನ್ನು ಗಮನಿಸುತ್ತಾ ಪಕ್ಕದಲ್ಲಿಯೇ ಹೋಗಿದ್ದಾನೆ. ನಂತರ ಒಂದು ತಿಂಗಳಿಗೆ ಅಶೋಕ್, ತರುಣ್, ಅಶೋಕ್‌ನ ತಂದೆ ಮೂವರೂ ಅವರ ಊರಿನಲ್ಲಿಯೇ ಒಂದುಕಡೆ ಬೇಟಿಯಾಗುವುದು ನಡೆದಿದೆ.

ಆಗ ಮೂವರೂ ಪಕ್ಕದ ಊರಿನಲ್ಲಿ ದಾರಿಪಕ್ಕದಲ್ಲಿ ಇಟ್ಟಿರುವ ನಾಲ್ಕು ತಲೆಗಳ ಬೊಂಬೆಯನ್ನು ಕುರಿತು ಮಾತನಾಡುತ್ತಾ ಅಶೋಕ್ ಹೀಗೆ ಹೇಳಿದ್ದಾನೆ. "ಪಕ್ಕದ ಊರಿನಲ್ಲಿನ ಬ್ರಹ್ಮ ಪ್ರತಿಮೆ ಬಹಳ ಚೆನ್ನಾಗಿದೆ. ಬ್ರಹ್ಮಮುಖದ ಮೇಲೆ ಕುಂಕುಮಬೊಟ್ಟು ತಳತಳ ಹೊಳಪನ್ನು ಹೊಂದಿದೆ" ಎಂದು ಹೇಳಿದ್ದಾನೆ. ಆಗ ತಕ್ಷಣ ತರುಣ್ ಹೀಗೆ ಎಂದನು. "ನಾನು ಸಹ ಆ ಬೊಂಬೆಯನ್ನು ನೋಡಿದ್ದೇನೆ. ನೀನು ಹೇಳಿದಹಾಗೆ ಮುಖದಮೇಲೆ ಬೊಟ್ಟು ಏನು ಹೊಳೆಯುತ್ತಿಲ್ಲ. ಅನವಶ್ಯವಾಗಿ ಅಸತ್ಯವನ್ನು ಏಕೆ ಹೇಳುತ್ತೀಯಾ" ಎಂದನು. ಆಗ ಅಲ್ಲಿಯೇ ಪಕ್ಕದಲ್ಲಿಯೇ ಇರುವ ಅಶೋಕ್ ತಂದೆಯವರು ಸಹ ತರುಣ್ ಹೇಳಿದಹಾಗೆ ತಾನೂ ಸಹ ನೋಡಿದ್ದೇನೆಂದು ಬ್ರಹ್ಮಮುಖದ ಮೇಲೆ ಬೊಟ್ಟು ಏನು ಹೊಳೆಯಲಿಲ್ಲ ಎಂದಿದ್ದಾನೆ. ಈಗ ಅಶೋಕ್ ಹೇಳಿರುವುದು ಸತ್ಯವೇ ಆದರೂ, ಇಬ್ಬರ ಲೆಕ್ಕದಲ್ಲಿ ಅದು ಅಸತ್ಯವಾಗಿದೆ. ತರುಣ್ ಮತ್ತು ಅಶೋಕನ ತಂದೆಯವರು ಸಹ ಅಸತ್ಯ ಹೇಳದೇ ಸತ್ಯವನ್ನೇ ಹೇಳುತ್ತಿದ್ದಾರೆ. ಹಾಗೆ ಅಶೋಕ್ ಸಹ ಸತ್ಯವೇ ಹೇಳಿದ್ದಾನೆ. ಅಶೋಕ್ ಲೆಕ್ಕದಲ್ಲಿ ಅಶೋಕ್ ಮಾತು ಸತ್ಯವೆ. ಹಾಗೆ ತರುಣ್, ಅಶೋಕ್ ತಂದೆಯವರ ಮಾತು ಸಹ ಅವರಿಬ್ಬರ ಲೆಕ್ಕದಲ್ಲಿ ಸತ್ಯವೆ. ಇಲ್ಲಿ ಯಾರಿಗೆ ಅವರದು ಸತ್ಯವೇಯಾಗಲಿ ಯಾರದೂ ಸುಳ್ಳಲ್ಲ. ಆದರೂ ಅಶೋಕ್ ಲೆಕ್ಕದಲ್ಲಿ ಅಶೋಕ್ ತಂದೆಯವರು, ತರುಣ್ ಇಬ್ಬರೂ ಅಸತ್ಯ ಹೇಳುವವರಾಗಿ ಲೆಕ್ಕಿಸಲ್ಪಟ್ಟಿದ್ದಾರೆ. ಹಾಗೆ ತರುಣ್, ಅಶೋಕ್ ತಂದೆಯವರ ದೃಷ್ಠಿಯಲ್ಲಿ ಅಶೋಕ್ ಸುಳ್ಳು ಹೇಳುವವನಾಗಿ ಲೆಕ್ಕಿಸಲ್ಪಟ್ಟಿದ್ದಾನೆ. ಅವರಿಗೆ ಸೂರ್ಯಕಿರಣಗಳ ವಿಷಯ ತಿಳಿಯದಿರುವುದರಿಂದ, ಅವರು ಯಾವಾಗ ಹೋಗಿದ್ದೇವೆಂದು ಹೋದ ಸಮಯವನ್ನು, ಹೋದ ದಿಕ್ಕನ್ನು ಕೇಳದೆ ಹೋಗಿರುವುದರಿಂದ ಸತ್ಯ ಅಸತ್ಯವಾಗಿ, ಅಸತ್ಯ ಸತ್ಯವಾಗಿ ಕಾಣಿಸಿದೆ. ಅದೇ ವಿಧವಾಗಿ ಮೂರು ಮತದವರು ಮೂರು ಗ್ರಂಥಗಳನ್ನು ಯಾವ ದೃಷ್ಠಿಯಿಂದ ಓದಿದ್ದೇವೆಂದು ನೋಡದೆನೇ ಒಬ್ಬರ ಗ್ರಂಥವನ್ನು ಮತ್ತೊಬ್ಬರು ತಪ್ಪು ಹಿಡಿಯುತ್ತಿದ್ದಾರೆ. ವಾಸ್ತವಕ್ಕೆ ಮೂರು ಗ್ರಂಥಗಳು ಸತ್ಯವನ್ನೇ ತಿಳಿಸುತ್ತಿವೆಯೆಂದು ಒಪ್ಪಿಕೊಳ್ಳದಂತಿದ್ದಾರೆ.

ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳ ರೂಪದಲ್ಲಿ ಕೊಟ್ಟಿದ್ದಾನೆ. ದೇವರು ಹಾಗೆ ಏಕೆ ಕೊಟ್ಟಿದ್ದಾನೆ? ಮೂರು ಗ್ರಂಥಗಳು ಒಂದೇ ವಿಧವಾಗಿ ಇರುವಂತೆ ಏಕೆ ಕೊಡಲಿಲ್ಲ ಎಂದು ಆಲೋಚಿಸಿದರೆ ಅದಕ್ಕೆ ಅಂತರ್ಮುಖ ವಾಗಿರುವ ಆತ್ಮವೇ ಹೀಗೆ ಉತ್ತರಕೊಡುತ್ತಿದೆ ಆ ಉತ್ತರ ಹೀಗೆ ಇದೆ. ದೇವರು ತ್ರೈತಸಿದ್ಧಾಂತದ ಪ್ರಕಾರ ಮೂರು ವಿಧಗಳಾಗಿ ವಿಭಜಿಸಲ್ಪಟ್ಟು ಜೀವಾತ್ಮ ಆತ್ಮ ಪರಮಾತ್ಮನಾಗಿ ಇದ್ದಾನೆ. ಆದ್ದರಿಂದ ತನ್ನ ಗ್ರಂಥಗಳನ್ನು ಮೂರು ಆತ್ಮಗಳಕಡೆಯಿಂದ ಹೇಳುವಂತೆ ಮಾಡಿದ್ದಾನೆ. ಜೀವಾತ್ಮ ದೈವಜ್ಞಾನವನ್ನು ಹೇಳಿದರೆ ಹೇಗಿರುತ್ತದೊ ಆ ವಿಧವಾಗಿ ಒಂದು ಗ್ರಂಥವನ್ನು, ಆತ್ಮ ದೈವಜ್ಞಾನವನ್ನು ಹೇಳಿದರೆ ಹೇಗಿರುತ್ತದೊ ಅದೇ ವಿಧವಾಗಿ ಮತ್ತೊಂದು ಗ್ರಂಥವನ್ನು ಹೇಳುವುದೇ ಅಲ್ಲದೆ, ಸ್ವತಃವಾಗಿ ಪರಮಾತ್ಮನಾಗಿ ತನ್ನ ಜ್ಞಾನವನ್ನು ಹೇಳಿದರೆ ಹೇಗಿರುತ್ತದೊ ಆ ವಿಧವಾಗಿ ಸಹ ಒಂದು ಗ್ರಂಥವನ್ನು ಹೇಳುವುದು ನಡೆದಿದೆ. ಪರಮಾತ್ಮ (ದೇವರು) ಹೇಳಿದರೆ ಹೇಗಿರುತ್ತದೋ ಎಲ್ಲರಿಗೂ ತಿಳಿಯುವಂತೆ ಪ್ರಥಮ ದೈವಗ್ರಂಥವನ್ನು ಕೃಷ್ಣನಿಂದ ಹೇಳಿಸುವುದು ನಡೆದಿದೆ. ಸೃಷ್ಠಿ ಆದಿಯಲ್ಲಿ ಆಕಾಶದ ಆತ್ಮದಿಂದ ವಾಣಿ ಮೂಲಕ ಹೇಳಲ್ಪಟ್ಟ ದೇವರ ಜ್ಞಾನವನ್ನು ಮೂರು ವಿಧಗಳಾಗಿ ಮೂವರಿಂದ ಹೇಳಿಸುವುದು ನಡೆದಿದೆ. ಇದೇ ವಿಷಯವನ್ನೇ ಚಿಕ್ಕ ಉದಾಹರಣೆಯಿಂದ ಹೇಳುತ್ತೇನೆ ನೋಡಿರಿ. ಒಂದು ಕೇಜಿ ಗೋಧಿಹಿಟ್ಟನ್ನು ಆಕಾಶ ಎಂಬುವವನಿಂದ ಸೂರ್ಯ ಎನ್ನುವಾತನು ಉಚಿತವಾಗಿ ತಂದುಕೊಂಡಿದ್ದಾನೆ ಎಂದುಕೊಳ್ಳೋಣ. ಆಕಾಶ ಎಂಬುವವನಿಂದ ತಂದುಕೊಂಡ ಹಿಟ್ಟನ್ನು ಸೂರ್ಯನು ಮುದ್ದೆಯಾಗಿ ಬೆರೆಸಿ, ಯಾರಾದರೂ ಆ ಹಿಟ್ಟಿನ ಮುದ್ದೆಯನ್ನು ರೊಟ್ಟಿಯಾಗಿ ಸುಟ್ಟುಕೊಂಡು ತಿನ್ನುವಂತೆ ಸಿದ್ಧಮಾಡಿ, ಭೂಮಿ ಮೇಲಿರುವ ಮನುವಿಗೆ ಕೊಟ್ಟಿದ್ದಾನೆ ಎಂದುಕೊಳ್ಳಿ. ಹಾಗೆ ಯಾವಾಗಲೋ ಕೆಲವು ಯುಗಗಳ ಕೆಳಗೆ ಕೊಟ್ಟಿರುವ ಹಿಟ್ಟನ್ನು ಯಾರೂ ತಿನ್ನದಂತೆ ಹಾಗೆಯೇ ಕೆಟ್ಟುಹೋಗದಂತೆ ಫ್ರಿಜ್‌ನಲ್ಲಿ ಇಟ್ಟುಕೊಂಡಿದ್ದಾನೆ ಎಂದುಕೊಳ್ಳಿ. 5000 ವರ್ಷಗಳ ಕೆಳಗೆ ಆ ಹಿಟ್ಟನಮುದ್ದೆಯಿಂದ 70 ರಷ್ಟು ಮುದ್ದೆಯನ್ನು ತೆಗೆದುಕೊಂಡು ಕೃಷ್ಣನು

ಚಪಾತಿಯಾಗಿ ಸುಟ್ಟು ಪ್ರಜೆಗಳಿಗೆ ತಿನ್ನುವುದಕ್ಕೆ ಕೊಟ್ಟಿದ್ದಾನೆಂದುಕೊಳ್ಳಿ ನಂತರ 3 ಸಾವಿರ ವರ್ಷಗಳಿಗೆ ಯೇಸು ಪ್ರಭು ಬಂದು 30 ರಷ್ಟು ಹಿಟ್ಟಿನಲ್ಲಿ 20 ರಷ್ಟು ಹಿಟ್ಟನ್ನು ತೆಗೆದುಕೊಂಡು ಪೂರಿಯಾಗಿ ಸುಟ್ಟು ಪ್ರಜೆಗಳಿಗೆ ಕೊಟ್ಟಿದ್ದಾನೆಂದುಕೊಳ್ಳಿ. ಅದು ಆದ 600 ವರ್ಷಗಳ ನಂತರ ಜಿಬ್ರಯೇಲ್ ಎಂಬುವಾತನು ಬಂದು ಇರುವ ಹತ್ತರಷ್ಟು ಹಿಟ್ಟನ್ನು ಪರೋಟವಾಗಿ ಸುಟ್ಟು ಪ್ರಜೆಗಳಿಗೆ ಕೊಟ್ಟಿದ್ದಾನೆಂದುಕೊಳ್ಳಿ ಆಗ ಕಲಿಯುಗ ಆರಂಭ (5000 ಸಂ॥) ದಿಂದ ಚಪಾತಿಯನ್ನು ತಿನ್ನುವವರು ಇದ್ದಾರೆ. ಎರಡು ಸಾವಿರ (2000) ವರ್ಷಗಳಿಂದ ಪೂರಿಯನ್ನು ತಿನ್ನುವವರಿದ್ದಾರೆ. 1400 ವರ್ಷಗಳಿಂದ ಪರೋಟವನ್ನು ತಿನ್ನುವವರಿದ್ದಾರೆ. ಆದರೆ ಇಲ್ಲಿ ಪರೋಟಾ ತಿನ್ನುವವರು ನನ್ನದು ಗೋದಿಹಿಟ್ಟಿನ ಪರೋಟಾ, ಅವರ ಪೂರಿ ಮೈದಾಹಿಟ್ಟಿನದು, ಇನ್ನೊಬ್ಬರ ರೊಟ್ಟಿ ಜೋಳದಹಿಟ್ಟು ಎಂದು ಆರೋಪಿಸುತ್ತಿದ್ದಾರೆ. ಹಾಗೆ ಪೂರಿ ತಿನ್ನುವವನು ನನ್ನದು ನಿಜವಾದ ಗೋದಿಹಿಟ್ಟಿನಿಂದ ಮಾಡಿದ ಪೂರಿ, ಉಳಿದವರದು ಗೋದಿಹಿಟ್ಟೆ ಅಲ್ಲ, ಒಬ್ಬರದು ಕಡ್ಲೆಹಿಟ್ಟು, ಮತ್ತೊಬ್ಬರದು ರಾಗಿಹಿಟ್ಟು ಎನ್ನುತ್ತಿದ್ದಾನೆ. ಇನ್ನು ಐದುಸಾವಿರ ವರ್ಷಗಳಿಂದ ಗೋದಿ ರೊಟ್ಟಿಯನ್ನು ತಿನ್ನುವವನು ನನ್ನದೇ ಅಸಲಾದ ಗೋದಿಹಿಟ್ಟು, ಮೊದಲು ಗೋದಿಹಿಟ್ಟಿನ ರೊಟ್ಟಿಯನ್ನು ತೆಗೆದುಕೊಂಡಿರುವುದು ನಾನೇ. ಉಳಿದವರದು ಗೋದಿಹಿಟ್ಟು ಅಲ್ಲವೆಂದು ಕೊಳ್ಳುತ್ತೇನೆ. ಅವರದು ಗೋದಿಹಿಟ್ಟು ಆದರೆ ಇವನ ಪೂರಿ ಬೆಳ್ಳಗೆ, ಅವನ ಪರೋಟಾ ಕೆಂಪಗೆ ಏಕಿವೆ ಎಂದು ಕೇಳುತ್ತಿದ್ದಾರೆ.

ಮೊದಲು ಆಕಾಶದಿಂದ ಸೂರ್ಯನು ತಂದುಕೊಂಡಿರುವುದು ಗೋದಿಹಿಟ್ಟು ಅದಾಗ, ಅದನ್ನೇ ಹೆಚ್ಚುಕಡಿಮೆಯಾಗಿ, ಮುಂದೆ ಹಿಂದೆಯಾಗಿ ತೆಗೆದುಕೊಂಡು ಚಪಾತಿಯಾಗಿ ಸುಟ್ಟುಕೊಂಡರೂ, ಪೂರಿಯಾಗಿ ಸುಟ್ಟುಕೊಂಡರೂ, ಪರೋಟವಾಗಿ ಸುಟ್ಟುಕೊಂಡರೂ ಅದರಲ್ಲಿ ಇರುವುದು ಗೋದಿಹಿಟ್ಟೆ. ಅದೇ ವಿಧವಾಗಿ ಮೊದಲು ಆಕಾಶದಿಂದ ಸೂರ್ಯನು ಕೇಳಿರುವುದು ದೈವಜ್ಞಾನವಾದಾಗ ಅದೇ ಜ್ಞಾನವನ್ನೇ ಮೂರರಷ್ಟಾಗಿ, ಮೂರು

ಕಾಲಗಳಲ್ಲಿ ಹೇಳಿಕೊಂಡು ಮೂರು ಹೆಸರುಗಳು ಇಟ್ಟುಕೊಂಡಿದ್ದಾರೆ. ಹೀಗೆ ಎಷ್ಟು ಹೆಸರುಗಳು ಇಟ್ಟುಕೊಂಡರೂ, ಎಷ್ಟುಜನ ಹೇಳಿಕೊಂಡರೂ ಅದರಲ್ಲಿರುವುದನ್ನೇ ಹೇಳಿಕೊಂಡಿದ್ದಾರೆ. ಆದಿಯಲ್ಲಿ ದೇವರು ಹೇಳಿದ ಜ್ಞಾನ ಹೊರತು ಏನೂಯಿಲ್ಲ. ಆ ವಿಷಯವನ್ನು ಈಗಿನ ಪ್ರಜೆಗಳು ಗುರುತಿಸಲಾರದೆ ಹೋಗಿದ್ದಾರೆ. ಮೊದಲು ಆಕಾಶವಾಣಿ ಸೂರ್ಯನಿಗೆ ಹೇಳಿದ ಜ್ಞಾನವನ್ನೇ ಕೃಷ್ಣನು ಭಗವದ್ಗೀತೆಯಾಗಿ ಪುನಃ ಎರಡನೆ ಬಾರಿ ಅರ್ಜುನನಿಗೆ ಹೇಳುವುದು ನಡೆದಿದೆ. ಅದನ್ನೇ ಪ್ರಥಮ ದೈವಗ್ರಂಥ ಎನ್ನುತ್ತಿದ್ದೇವೆ. ನಂತರ ಸ್ವಲ್ಪಕಾಲಕ್ಕೆ ಯೇಸುಬಂದು ಸುವಾರ್ತೆಬೈಬಲ್‌ನನ್ನು ಹೇಳುವುದು ನಡೆದಿದೆ. ಆಗ ಆ ಗ್ರಂಥವನ್ನು ದ್ವಿತೀಯ ದೈವಗ್ರಂಥ ಎಂದು ಹೇಳಿದ್ದೇವೆ. ನಂತರ ಸ್ವಲ್ಪಕಾಲಕ್ಕೆ ಜಿಬ್ರಯೇಲ್ ಎಂಬ ಗ್ರಹ ಭೂಮಿಮೇಲಕ್ಕೆ ಬಂದು ಮುಹಮ್ಮದ್ ಪ್ರವಕ್ತರಿಗೆ ಹೇಳುವುದು ನಡೆದಿದೆ. ಆಗ ಆ ಗ್ರಂಥವನ್ನು ಅಂತಿಮ ದೈವಗ್ರಂಥ ಎಂದು ಹೇಳುವುದು ನಡೆದಿದೆ. ಈ ವಿಧವಾಗಿ ದ್ವಾಪರಯುಗ ಕೊನೆಯಿಂದ ಎಂದರೆ ಕಲಿಯುಗದ ಮೊದಲಿನಿಂದ ಮೂರು ಗ್ರಂಥಗಳನ್ನು ದೇವರುಕೊಟ್ಟಿದ್ದಾನೆ. ಮೂರು ಗ್ರಂಥಗಳು ಮೂರು ಕಾಲಗಳಲ್ಲಿ, ಮೂರು ದೇಶಗಳಲ್ಲಿ ಹೊರ ಬಂದರೂ, ಅದರಲ್ಲಿರುವುದು ಸೂರ್ಯನಿಗೆ ಹೇಳಿದ ಜ್ಞಾನಹೊರತು ಮತ್ತೊಂದು ಇಲ್ಲ. ಮೂರು ಗ್ರಂಥಗಳಲ್ಲಿಯೂ ಒಂದೇ ಜ್ಞಾನವಿದ್ದರೂ ಅದನ್ನು ಮನುಷ್ಯರು ಸರಿಯಾದ ಬುದ್ಧಿಯಿಂದ ಗ್ರಹಿಸಲಾರದೆ, ಮೂರು ಗ್ರಂಥಗಳಲ್ಲಿನ ಜ್ಞಾನವನ್ನು ಬೇರೆಬೇರೆ ದೇವರುಗಳ ಜ್ಞಾನವೆಂದುಕೊಂಡಿದ್ದಾರೆ. ಆಕಾಶದಿಂದ ಭೂಮಿ ಮೇಲಕ್ಕೆ ಬಂದಿರುವುದು ಒಂದೇ ಜ್ಞಾನವಾದಾಗ ಅದನ್ನು ಬೇರೆಬೇರೆ ಜ್ಞಾನಗಳಾಗಿ ವರ್ಣಿಸಿ ಹೇಳುವುದು ಪೂರ್ತಿ ತಪ್ಪಾಗುತ್ತದೆ.

ದೇವರು ಭೂಮಿಮೇಲಕ್ಕೆ ಕಳುಹಿಸಿದ ಜ್ಞಾನ ಒಂದೇ ಆದರೂ, ಅದು ಮೂರು ಕೋನಗಳಿಂದ ಹೇಳಲ್ಪಟ್ಟಿದೆಯೆಂದು ಮೊದಲೇ ಹೇಳಿ ಕೊಂಡಿದ್ದೇವೆ. ಅದರಲ್ಲಿ ಮೊಟ್ಟಮೊದಲು ಕೃಷ್ಣನು ಹೇಳಿದ ಭಗವದ್ಗೀತೆಯನ್ನು ಪ್ರಥಮ ದೈವಗ್ರಂಥವಾಗಿ ಹೇಳಿಕೊಳ್ಳಬಹುದು. ಪ್ರಥಮ ದೈವಗ್ರಂಥವೆಂದು

ಏಕೆ ಹೇಳುತ್ತಿದ್ದೇವೆಂದರೆ, ಭಗವದ್ಗೀತೆಯನ್ನು ಮೂವರು ಪುರುಷರಲ್ಲಿ ಪುರುಷೋತ್ತಮನಾದ ಪರಮಾತ್ಮನಿಂದ ಹೇಳಲಾದ ಜ್ಞಾನವಾಗಿರುವುದರಿಂದ ಅದನ್ನು ಪ್ರಥಮ ದೈವಗ್ರಂಥ ಎನ್ನುತ್ತೇವೆ. ದೇವರು ಮೂರು ವಿಧಗಳಲ್ಲಿ ವಿಭಜಿಸಲ್ಪಟ್ಟಾಗ ಅದರಲ್ಲಿ ಒಂದು ಜೀವಾತ್ಮ, ಎರಡನೆಯದು ಆತ್ಮ, ಉಳಿದಿರುವುದು ಪರಮಾತ್ಮಯೆಂದು, ಪರಮಾತ್ಮನೇ ಮುಲ್ಲೋಕಗಳು ಆವಹಿಸಿದ ದೇವರೆಂದು, ಭಗವದ್ಗೀತೆಯಲ್ಲಿ ಹೇಳಿಕೊಂಡಿದ್ದೇವೆ. ಮೂರರಲ್ಲಿ ದೊಡ್ಡವನಾದ ಪರಮಾತ್ಮನನ್ನು ಪ್ರಥಮ ದೈವವೆಂದು, ಎರಡನೆಯವನನ್ನು ದ್ವಿತೀಯ ದೈವವೆಂದು, ಮೂರನೆಯದನ್ನು ಮೂರನೆಯ ಅಥವಾ ಅಂತಿಮ ದೈವವೆಂದೂ ಹೇಳಬಹುದು. ಜೀವಾತ್ಮವಾಗಿ ಇರುವವನನ್ನು ಅಂತಿಮದೈವವೆಂದು, ಆತ್ಮವನ್ನು ಮಧ್ಯ ದೈವ ಅಥವಾ ದ್ವಿತೀಯ ದೈವವೆಂದು, ಹಾಗೇ ಮೂರನೆಯವನಾದ ಪರಮಾತ್ಮನನ್ನು ಪ್ರಥಮ ದೈವವೆಂದು ಎನ್ನುತ್ತಿದ್ದೇವೆ. ಈ ಸೂತ್ರವನ್ನು ಅನುಸರಿಸಿ ಪರಮಾತ್ಮ ಸ್ವತಃವಾಗಿ ಹೇಳಿದ ಗ್ರಂಥವನ್ನು ಪ್ರಥಮ ದೈವಗ್ರಂಥವೆಂದು ಹೇಳಬೇಕಾಗಿಬಂದಿದೆ. ಹಾಗೇ ಎರಡನೆಯದಾದ ಆತ್ಮ ಪರವಾಗಿ ಹೇಳಿದ ಗ್ರಂಥವನ್ನು ದ್ವಿತೀಯ ದೈವಗ್ರಂಥವೆಂದೂ ಇಲ್ಲವೆ ಮಧ್ಯ ದೈವಗ್ರಂಥವೆಂದೂ ಹೇಳುವುದಾಗಿದೆ. ಇನ್ನು ಜೀವಾತ್ಮ ಪರವಾಗಿ ಹೇಳಿದ ಗ್ರಂಥವನ್ನು ಅಂತಿಮ ದೈವಗ್ರಂಥ ಎಂದು ಹೇಳಬೇಕಾಗಿ ಬಂದಿದೆ. ಈ ವಿಧವಾಗಿ ಮೂರು ಆತ್ಮಗಳ ಪಾತ್ರಗಳಿಂದ ಹೇಳಲ್ಪಟ್ಟ ಜ್ಞಾನವನ್ನು, ಆತ್ಮಗಳಿಗೆ ತಕ್ಕಾದ ಸ್ಥಾನದಲ್ಲಿಯೇ ಇಂತಹ ದೈವಗ್ರಂಥಗಳೆಂದು ಹೇಳಿದ್ದಾರೆ.

ಅಸಲಾದ ವಿಷಯಕ್ಕೆ ಬಂದರೆ ಪ್ರಥಮ ದೈವಗ್ರಂಥದಲ್ಲಿನ ಜ್ಞಾನವನ್ನು ಪರಮಾತ್ಮನೇ ಹೇಗೆ ಹೇಳಿದ್ದಾನೊ ಸ್ವಲ್ಪ ಗಮನಿಸೋಣ. ಹಾಗೆ ಗಮನಿಸುವುದರಿಂದ ಉಳಿದ ಎರಡು ಗ್ರಂಥಗಳಲ್ಲಿ ಆತ್ಮ, ಜೀವಾತ್ಮ ಹೇಗೆ ಹೇಳಿವೆಯೊ ಸುಲಭವಾಗಿ ಗ್ರಹಿಸಬಹುದು. ಪರಮಾತ್ಮನಿಂದ ಹೇಳಲ್ಪಟ್ಟ ಮೊದಲ ಗ್ರಂಥ ಭಗವದ್ಗೀತೆ. ಭಗವದ್ಗೀತೆ ಉಳಿದ ಆತ್ಮ, ಜೀವಾತ್ಮಗಳು ಹೇಳಿದ ಗ್ರಂಥಕ್ಕೆ ಆಧಾರವಾಗಿದೆ. ಆದ್ದರಿಂದ ಉಳಿದ ಎರಡು ಗ್ರಂಥಗಳಿಗು ಭಗವದ್ಗೀತೆ

ಮಾತೃಗ್ರಂಥವೆಂದು ಹೇಳಬಹುದು. ಭಗವದ್ಗೀತೆ ಪರಮಾತ್ಮನಿಂದ ಹೇಳಿರುವುದಾದ್ದರಿಂದ ಅಧಿಕಾರಪೂರ್ವಕವಾಗಿ ಕೆಲವು ವಾಕ್ಯಗಳಿರುವುದನ್ನು ಗ್ರಹಿಸಬಹುದು. ಅಷ್ಟೇಅಲ್ಲದೆ ಹೇಳಿರುವುದು ಮೇಲ್ನೋಟಕ್ಕೆ ಕಾಣಿಸುವ ಕೃಷ್ಣನೇ ಆದರೂ, ಸಾಕ್ಷ್ಯಾತ್ತೂ ದೇವರು ಹೇಳಿದಹಾಗೇ ಭಗವದ್ಗೀತೆಯಲ್ಲಿ ಕಾಣಿಸುತ್ತದೆ. ಮೋಕ್ಷಸನ್ಯಾಸಯೋಗ 66ನೇ ಶ್ಲೋಕದಲ್ಲಿ **"ಸರ್ವ ಧರ್ಮಗಳನ್ನು ಬಿಟ್ಟು ನನ್ನನ್ನು ಮಾತ್ರ ಶರಣು ಬೇಡಿದವನನ್ನು ಸರ್ವಪಾಪಗಳಿಂದ ತಪ್ಪಿಸಿ ಮುಕ್ತಿಯನ್ನು ಕೊಡುತ್ತೇನೆ"** ಎನ್ನುವುದು ಮೂರನೇ ಪುರುಷನಾದ ಪುರುಷೋತ್ತಮನಿಂದ ಅಲ್ಲದೆ ಯಾರ ಕೈಯಲ್ಲಾಗುತ್ತದೆ? ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ **ಯಾರಾದರೆ ತನ್ನಲ್ಲಿನ ಅಜ್ಞಾನವನ್ನು ತೊಲಗಿಸಿಕೊಂಡು ನನ್ನನ್ನೇ ಪುರುಷೋತ್ತಮ ನನ್ನಾಗಿ ತಿಳಿದು ಎಲ್ಲಾ ವಿಧಗಳಲ್ಲಿ ನನ್ನನ್ನೇ ಆರಾಧಿಸುವನೋ ಅವನನ್ನು ಸರ್ವಜ್ಞನೆಂದು** ಹೇಳಬಹುದು. ಈ ಮಾತನ್ನು ಪರಮಾತ್ಮ ಹೊರತು ಉಳಿದವರು ಹೇಳುವುದಕ್ಕೆ ಸಾಧ್ಯವಾಗುತ್ತದಾ? ಅಷ್ಟೇ ಅಲ್ಲದೆ ಗುಣತ್ರಯ ವಿಭಾಗ ಯೋಗದಲ್ಲಿ **ಪ್ರಕೃತಿಗೆ ನಾನು ಪತಿಯು ಸರ್ವಜೀವರಾಶಿಗಳಿಗು ತಾಯಿ ಪ್ರಕೃತಿಯಾದರೆ, ನಾನು ತಂದೆ** ಎಂದು ದೇವರು ಹೊರತು ಯಾರು ಹೇಳುತ್ತಾರೆ? **ಇಂದ್ರಿಯಾಗೋ ಚರನಾದ ಈ ಜಗವೆಲ್ಲಾ ವ್ಯಾಪಿಸಿರುವ ನಾನು ಸರ್ವಜೀವರಾಶಿ ಗಳಿಗು ಆಧಾರವಾಗಿದ್ದೇನೆಂದು ನಾನು ಅವುಗಳ ಮೇಲೆ ಆಧಾರಪಡಲಿಲ್ಲವೆಂದು** ದೇವರು ಹೊರತು ಇತರರು ಹೇಳುತ್ತಾರಾ? ಹಾಗೇ ಸರ್ವವೂ ತಾನಾದ ವಿಶ್ವರೂಪವನ್ನು ಪ್ರದರ್ಶಿಸಿದವನು ಮೂರನೇ ಪುರುಷನಾದ ಪುರುಷೋತ್ತಮನು ಅಲ್ಲದೆ ಯಾರಾಗುತ್ತಾನೆ? ನನ್ನನ್ನೇ ಮುಗಿ, ನನ್ನನ್ನೇ ನಮಸ್ಕರಿಸು, ನನ್ನನ್ನೇ ಪಡೆ ಯುತ್ತೀಯ ಎಂದು ದೇವರು ಹೊರತು ಇತರರು ಹೇಳುತ್ತಾರಾ? ಈ ವಿಧವಾಗಿ ನೋಡಿದರೆ **ಭಗವದ್ಗೀತೆ ಗ್ರಂಥವನ್ನು ಸ್ವತಃವಾಗಿ ಪರಮಾತ್ಮನಾಗಿಯೇ ಹೇಳಿದ್ದಾನೆ.** ಆದ್ದರಿಂದ ಅದು ಪ್ರಥಮ ದೈವಗ್ರಂಥವಾಗಿದೆ.

ಎರಡನೇ ಗ್ರಂಥವಾದ ಸುವಾರ್ತೆಬೈಬಲನ್ನು ನೋಡಿದರೆ ಬೈಬಲ್ ಗ್ರಂಥದಲ್ಲಿನ ವಾಕ್ಯಗಳೆಲ್ಲವನ್ನು ಜೀವಾತ್ಮ, ಪರಮಾತ್ಮರ ಮಧ್ಯದಲ್ಲಿನ ಆತ್ಮ ಬೋಧಿಸಿದೆಯೆಂದು ತಿಳಿಯುತ್ತದೆ. ಸುವಾರ್ತೆ ಬೈಬಲ್‌ಗಾಗಿ ಒಂದು ವಾಕ್ಯವನ್ನು

ಸಾಕ್ಷ್ಯವಾಗಿ ತೆಗೆದುಕೊಂಡು ನೋಡೋಣ. ಯೋಹಾನ್ ಸುವಾರ್ತೆ 14ನೇ ಅಧ್ಯಾಯ 20ನೇ ವಾಕ್ಯ **"ನಾನು ನನ್ನ ತಂದೆಯಲ್ಲಿಯೂ, ನೀವು ನನ್ನಲ್ಲಿಯೂ, ನಾನು ನಿಮ್ಮಲ್ಲಿಯೂ ಇದ್ದೇನೆಂದು ನೀವು ತಿಳಿಯುವಿರಿ"** ಎಂದಿದ್ದಾನೆ. ಈ ವಾಕ್ಯದಲ್ಲಿ ನೀವು ಎಂದರೆ ಪ್ರಜೆಗಳೆಂದು ಅರ್ಥವಾಗುತ್ತದೆ. ನಾನು ನನ್ನ ತಂದೆಯಲ್ಲಿಯೂ ಎಂಬ ವಾಕ್ಯದಲ್ಲಿ ತಂದೆಯೆಂದರೆ ದೇವರು, ಆತ್ಮ ದೇವರಲ್ಲಿ ಮತ್ತು ಪ್ರಜೆಗಳಲ್ಲಿ ಎರಡುಕಡೆಯಲ್ಲಿಯೂ ಇದೆಯೆಂದು, ಅದೇ ದೇವರಿಗೂ ಮನುಷ್ಯರಿಗೂ ಮಧ್ಯದಲ್ಲಿರುವ ಆತ್ಮಯೆಂದು, ಆತ್ಮವೇ ಬೈಬಲ್‌ಗ್ರಂಥವನ್ನು ಬೋಧಿಸಿದೆಯೆಂದು ಆ ಗ್ರಂಥದಲ್ಲಿ ಅನೇಕ ವಾಕ್ಯಗಳು ಕಾಣಿಸುತ್ತಿವೆ. ಅಂತಿಮ ದೈವಗ್ರಂಥವನ್ನು ನೋಡಿದರೆ ಜೀವಾತ್ಮನಾಗಿ ಜಿಬ್ರಯೇಲ್ ಇದ್ದು ಖುರ್‌ಆನ್‌ನಲ್ಲಿನ ಪ್ರತಿ ವಾಕ್ಯವನ್ನು ಜೀವಿಯು ಹೇಳಿದಹಾಗೇ ಹೇಳಿದ್ದಾನೆ. ಖುರ್‌ಆನ್ ಗ್ರಂಥದಲ್ಲಿ ದೇವರು ಹೇಳಿದಂತಾಗಲಿ, ಆತ್ಮ ಹೇಳಿದಂತಾಗಲಿ ಇರದೆ, ಸಾಮಾನ್ಯ ಮನುಷ್ಯ ಇನ್ನೊಬ್ಬ ವ್ಯಕ್ತಿಗೆ ಹೇಳಿದಂತೆ, ಮುಹಮ್ಮದ್ ಪ್ರವಕ್ತರಿಗೆ ಬೋಧಿಸಿದಂತೆ ಇದೆ. ಈ ವಿಧವಾಗಿ **ಮೂರು ಗ್ರಂಥಗಳಲ್ಲಿ ಪರಮಾತ್ಮನಿಂದ ಅಧಿಕಾರವಾಗಿ ಹೇಳಲ್ಪಟ್ಟಂತೆ ಭಗವದ್ಗೀತೆ ಗ್ರಂಥವಿರುವಾಗ, ಆತ್ಮ ಹೇಳಿದಹಾಗೆ ಬೈಬಲ್ ಇರುವಾಗ, ಜೀವಾತ್ಮ ಹೇಳಿದಹಾಗೆ ಖುರ್‌ಆನ್ ಗ್ರಂಥ ಇದೆ.** ಈಗಿನಿಂದ ನೋಡಿದವರಿಗೆ ಮೂರು ಗ್ರಂಥಗಳಲ್ಲಿ ಜೀವಾತ್ಮ, ಆತ್ಮ, ಪರಮಾತ್ಮರು ಬೋಧಿಸಿದ ವ್ಯತ್ಯಾಸಗಳು ಕಾಣಿಸಬಲ್ಲವು. ಆದ್ದರಿಂದ ವಿಚಕ್ಷಣ ಹೊಂದಿ ಮೂರು ಗ್ರಂಥಗಳನ್ನು ಓದೆಂದು ಹೇಳುತ್ತಾ ಇಲ್ಲಿಗೆ ಮುಗಿಸುತ್ತಿದ್ದೇವೆ.

# ಮುಕ್ತಾಯ

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅಗತ್ಯವೋ, ಹಾಗೆ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅಗತ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ.**
**ಸತ್ಯವನ್ನು ಸಾವಿರಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಪ್ರಮುಖರ ಲೇಖ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ- ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

**visit website : www.thraithashakam.org**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.
2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.
3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.
4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.
5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.
6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ** (I.G.V)

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ




**ಸುವಾರ್ತ ಕ್ರೈಸ್ತವ ಸಂಘ (S.K.S)**

**(Regd.No.: 159/2015)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

***www. suvarthakraisthavasangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

*www.dravidashreshtisangham.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ




**ರಾವಣಬ್ರಹ್ಮ ದ್ರಾವಿಡ ಬ್ರಾಹ್ಮಣ ಸಂಘ (R.B.D.B.S)**

**(Regd.No.: 309/2015)**

ತಾರ್ನಾಕ, ಹೈದರಾಬಾದ್, ತೆಲಂಗಾಣ–500007.

e-mail id : info@ravanabrahmadravidabrahmanasangham.org

***www.ravanabrahmadravidabrahmanasangham.org***

# ಮೂರು ಗ್ರಂಥಗಳು, ಇಬ್ಬರು ಗುರುಗಳು

## ಒಬ್ಬ ಬೋಧಕನು



ಶ್ರೀಕೃಷ್ಣಂ ವಂದೇ ಜಗದ್ಗುರುಮ್